ಅವಿಮುಕ್ತೇ ಮಹಾಕ್ಷೇತ್ರೇ ತೋಷಿತಸ್ತೇನ ಶಂಕರಃ ।
ವರಂ ವೃಣೀಷ್ವೇತಿ ತದಾ ತಂ ಪ್ರೋವಾಚ ನೃಪಾತ್ಮಜಂ ॥ ೩೦ ॥

ಸ ವವ್ರೇ ಭಗವನ್ಕೃತ್ಯಾ ಪಿತುರ್ಹಂತುರ್ವಧಾಯ ಮೇ ।
ಸಮುತ್ತಿಷ್ಠತು ಕೃಷ್ಣಸ್ಯ ತ್ವತ್ಪ್ರಸಾದಾನ್ಮಹೇಶ್ವರ ॥ ೩೧ ॥

॥ ವ್ಯಾಸ ಉವಾಚ ॥

ಏವಂ ಭವಿಷ್ಯತೀತ್ಯುಕ್ತೇ ದಕ್ಷಿಣಾಗ್ನೇರನಂತರಂ ।
ಮಹಾಕೃತ್ಯಾ ಸಮುತ್ತಸ್ಥೌ ತಸ್ಯೈವಾಗ್ನಿ ನಿವೇಶನಾತ್ ॥ ೩೨ ॥

ತತೋ ಜ್ವಾಲಾಕರಾಲಾಸ್ಯಾ ಜ್ವಲತ್ಕೇಶಕಲಾಪಿಕಾ ।
ಕೃಷ್ಣ ಕೃಷ್ಣೇತಿ ಕುಪಿತಾ ಕೃತ್ವಾ ದ್ವಾರವತೀಂ ಯಯೌ ॥ ೩೩ ॥

---

೩೦. ಅತ್ಯುತ್ತಮ ಕ್ಷೇತ್ರವಾದ ಕಾಶಿಯಲ್ಲಿ ಆರಾಧಿಸಿದುದರಿಂದ ಸಂತೋಷ ತಾಳಿದ ಶಂಕರನು ಕಾಶೀರಾಜ ಕುಮಾರನನ್ನು ಕುರಿತು "ನಿನಗಾವ ವರವು ಬೇಕು, ಕೇಳು'' ಎಂದನು.

೩೧. ಆಗ ಅವನು ಶಿವನನ್ನು ಕುರಿತು "ಓ ಮಹೇಶ್ವರ! ನನ್ನ ತಂದೆಯನ್ನು ಕೊಂದ ಕೃಷ್ಣನನ್ನು ಕೊಲ್ಲಲು ಕೃತ್ಯೆಯೊಂದು (ಮಾಟದ ಮಾರಿ) ಉಂಟಾಗಲಿ" ಎಂದು ಬೇಡಿದನು.

೩೨. ಎಲೈ ದ್ವಿಜೋತ್ತಮರೇ! "ನಿನ್ನ ಅಪೇಕ್ಷೆಯಂತೆಯೇ ಆಗುವುದು" ಎಂದು ಶಿವನು ಅನುಗ್ರಹಿಸಿದೊಡನೆಯೇ ಆ ಕಾಶೀರಾಜ ಪುತ್ರನ ಅಗ್ನಿಹೋತ್ರ ಶಾಲೆಯಲ್ಲಿದ್ದ ದಕ್ಷಿಣಾಗ್ನಿಯ ವೇದಿಕೆಯಿಂದ ಮಹಾಕೃತ್ಯೆಯೊಂದು ಉದ್ಧರಿಸಿತು.

೩೩. ಕೂಡಲೇ ಆ ಕೃತ್ಯೆಯು ತನ್ನ ಮುಖದಿಂದ ಮೇಲೆ ಮೇಲೆ ಜ್ವಾಲೆಗಳನ್ನುಗುಳುತ್ತಾ, ಉರಿಯುತ್ತಿರುವ ತಲೆಗೂದಲುಗಳಿಂದ ಭಯಂಕರಳಾಗಿ "ಕೃಷ್ಣ! ಕೃಷ್ಣ!'' ಎಂದು ಅರಚುತ್ತಾ ಕೋಪದಿಂದ ದ್ವಾರಕೆಯಕಡೆ ಹೊರಟಳು.

**ತಾಮವೇಕ್ಷ್ಯ ಜನಃ ಸರ್ವೋ ರೌದ್ರಾಂ ವಿಕೃತಲೋಚನಾಂ ।**
**ಯಯೌ ಶರಣ್ಯಂ ಜಗತಾಂ ಶರಣಂ ಮಧುಸೂದನಂ ॥ ೩೪ ॥**

**॥ ಜನಾ ಊಚುಃ ॥**

**ಕಾಶಿರಾಜಸುತೇನೇಯಮಾರಾಧ್ಯ ವೃಷಭಧ್ವಜಂ ।**
**ಉತ್ಪಾದಿತಾ ಮಹಾಕೃತ್ಯಾ ವಧಾಯ ತವ ಚಕ್ರಿಣಃ ।**
**ಜಹಿ ಕೃತ್ಯಾಮಿಮಾಮುಗ್ರಾಂ ವಹ್ನಿಜ್ವಾಲಾಜಟಾಕುಲಾಂ ॥ ೩೫ ॥**

**॥ ವ್ಯಾಸ ಉವಾಚ ॥**

**ಚಕ್ರಮುತ್ಸೃಷ್ಟಮಕ್ಷೇಷು ಕ್ರೀಡಾಸಕ್ತೇನ ಲೀಲಯಾ ।**
**ತದಗ್ನಿಮಾಲಾಜಟಿಲಂ ಜ್ವಾಲೋದ್ಗಾರಾತಿಭೀಷಣಂ ॥ ೩೬ ॥**

**ಕೃತ್ಯಾಮನುಜಗಾಮಾಶು ವಿಷ್ಣುಚಕ್ರಂ ಸುದರ್ಶನಂ ।**
**ತತಃ ಸಾ ಚಕ್ರವಿಧ್ವಸ್ತಾ ಕೃತ್ಯಾ ಮಾಹೇಶ್ವರೀ ತದಾ ॥ ೩೭ ॥**

---

೩೪. ಆಗ ದ್ವಾರಕಾಪುರನಿವಾಸಿಗಳು ವಿಕಾರವಾದ ಕಣ್ಣುಗಳಿಂದ ಕೂಡಿ ಭಯಂಕರವಾಗಿ ಬರುತ್ತಿರುವ ಆ ಕೃತ್ಯೆಯನ್ನು ಕಂಡು ಹೆದರಿಕೆಯಿಂದ ತಲ್ಲಣಿಸುತ್ತಾ ಜಗತ್ಸಂರಕ್ಷಣತತ್ಪರನಾದ ಕೃಷ್ಣನನ್ನು ಮರೆಹೊಕ್ಕರು.

೩೫. "ಓ ಕೃಷ್ಣ! ನಿನ್ನನ್ನು ಕೊಲ್ಲಬೇಕೆಂದು ಕಾಶೀರಾಜಪುತ್ರನು ಶಿವನನ್ನು ಆರಾಧಿಸಿ ಈ ಮಹಾಕೃತ್ಯೆಯನ್ನು ಸೃಷ್ಟಿಮಾಡಿಸಿರುವನು. ಅಗ್ನಿ ಜ್ವಾಲೆಯಂತೆ ಉರಿಯುತ್ತಿರುವ ಜಡೆಗಳುಳ್ಳ ಭಯಂಕರಳಾದೀ ಕೃತ್ಯೆಯನ್ನು ಮೊದಲು ನಿಗ್ರಹಿಸು" ಎಂದು ಮೊರೆಯಿಟ್ಟರು.

೩೬. ಆಗ ಶ್ರೀಕೃಷ್ಣನು ಪಗಡೆಯಾಟದಲ್ಲಿ ತೊಡಗಿದ್ದನು. ಹಾಗೆ ಇದ್ದಂತೆಯೇ ಶ್ರೀಕೃಷ್ಣನು ಚಕ್ರವನ್ನು ಕೃತ್ಯೆಯಮೇಲೆ ಪ್ರಯೋಗಿಸಿದನು. ವಿಷ್ಣುವಿನ ಚಕ್ರವಾದ ಆ ಸುದರ್ಶನವು ಬೆಂಕಿಯ ಮಾಲೆಗಳನ್ನುಗುಳುತ್ತಾ ಬಹುಭಯಂಕರವಾಗಿ ವೇಗದಿಂದ ಕೃತ್ಯೆಯನ್ನು ಬೆನ್ನಟ್ಟಿತು.

೩೭–೩೮. ಬಳಿಕ ಮಹೇಶ್ವರ ನಿರ್ಮಿತವಾದ ಆ ಕೃತ್ಯೆಯು ಚಕ್ರದಿಂದ ಛಿನ್ನಭಿನ್ನವಾಗುತ್ತಾ ಬೇಗ ಬೇಗ ಓಡತೊಡಗಿತು. ಆ ಚಕ್ರವೂ ವೇಗ

ಜಗಾಮ ವೇಗಿನೀ ವೇಗಾತ್ತದಪ್ಯನುಜಗಾಮ ತಾಂ ।
ಕೃತ್ಯಾ ವಾರಾಣಸೀಮೇವ ಪ್ರವಿವೇಶ ತ್ವರಾನ್ವಿತಾ ॥ ೩೮ ॥

ವಿಷ್ಣುಚಕ್ರಪ್ರತಿಹತಪ್ರಭಾವಾ ಮುನಿಸತ್ತಮಾಃ ।
ತತಃ ಕಾಶಿಬಲಂ ಭೂರಿ ಪ್ರಮಥಾನಾಂ ತಥಾ ಬಲಂ ॥ ೩೯ ॥

ಸಮಸ್ತಶಸ್ತ್ರಾಸ್ತ್ರಯುತಂ ಚಕ್ರಸ್ಯಾಭಿಮುಖಂ ಯಯೌ ।
ಶಸ್ತ್ರಾಸ್ತ್ರಮೋಕ್ಷಬಹುಲಂ ದಗ್ಧ್ವಾ ತದ್ಬಲಮೋಜಸಾ ॥ ೪೦ ॥

ಕೃತ್ವಾಕ್ಷೇಮಾಮಶೇಷಾಂ ತಾಂ ಪುರೀಂ ವಾರಾಣಸೀಂ ಯಯೌ ।
ಪ್ರಭೂತಭೃತ್ಯಪೌರಾಂ ತಾಂ ಸಾಶ್ವಮಾತಂಗಮಾನವಾಂ ॥ ೪೧ ॥

ಅಶೇಷದುರ್ಗಕೋಷ್ಠಾಂ ತಾಂ ದುರ್ನಿರೀಕ್ಷ್ಯಾಂ ಸುರೈರಪಿ ।
ಜ್ವಾಲಾಪರಿವೃತಾಶೇಷಗೃಹಪ್ರಾಕಾರತೋರಣಾಂ ॥ ೪೨ ॥

---

ದಿಂದಲೇ ಅದನ್ನು ಹಿಂಬಾಲಿಸಿತು. ಆಗ ಕೃತ್ಯೆಯು ಬೇಗ ಬೇಗನೆ ಓಡುತ್ತಾ ಕಾಶಿಯನ್ನೇ ಹೊಕ್ಕಿತು. ಎಲೈ ಮುನಿಗಳಿರಾ! ವಿಷ್ಣುಚಕ್ರದ ಮುಂದೆ ಕೃತ್ಯೆಯ ಆಟವೇನೂ ಸಾಗಲಿಲ್ಲ.

೩೯-೪೦. ಆಗ ಕಾಶೀರಾಜಕುಮಾರನ ಸೇನೆಯೂ, ಪ್ರಮಥಗಣಗಳ ಸೇನೆಯೂ, ಸಕಲವಿಧವಾದ ಶಸ್ತ್ರಾಸ್ತ್ರಗಳನ್ನು ಧರಿಸಿ ಆ ಚಕ್ರಕ್ಕೆದುರಾಗಿ ಹೊರಟುವು. ಆದರೇನು? ಆ ಚಕ್ರವು ಶಸ್ತ್ರಗಳನ್ನೂ ಅಸ್ತ್ರಗಳನ್ನೂ ತನ್ನ ಮೇಲೆ ಪ್ರಯೋಗಿಸುತ್ತಿದ್ದ ಆ ಸೇನೆಯೆಲ್ಲವನ್ನೂ ಸುಟ್ಟು ಬೂದಿ ಮಾಡಿದುದಲ್ಲದೆ ಆ ಕಾಶೀಪುರಿಯೆಲ್ಲವನ್ನೂ ಕ್ಷೇಮರಹಿತವಾದುದನ್ನಾಗಿ ಮಾಡಿತು.

೪೧-೪೩. ಇತರ ಸಹಾಯವನ್ನು ಸ್ವಲ್ಪವೂ ಅಪೇಕ್ಷಿಸದಿದ್ದಂತಹ ಆ ಸುದರ್ಶನ ಚಕ್ರವು ಅನೇಕಮಂದಿ ಸೇವಕರಿಂದಲೂ, ಪಟ್ಟಣಿಗರಿಂದಲೂ, ಆನೆ ಕುದುರೆಗಳಿಂದಲೂ ತುಂಬಿ ತುಳುಕಾಡುತ್ತಾ, ದುರ್ಗಮವಾದ ಕೋಟೆ ಕೊತ್ತಲೆಗಳಿಂದ ದೇವತೆಗಳಿಗೂ ಕೂಡ ನೋಡಲು ಅಸದಳವೆನಿಸಿ ಮೆರೆಯುತ್ತಿದ್ದ ಆ ಕಾಶೀಪುರಿಯ ಸಮಸ್ತ ಗೃಹಗಳನ್ನೂ, ಕೋಟೆಗಳನ್ನೂ, ಹೆಬ್ಬಾ

ದದಾಹ ತಾಂ ಪುರೀಂ ಚಕ್ರಂ ಸಕಲಾಮೇವ ಸತ್ವರಂ ।
ಅಕ್ಷೀಣಾಮರ್ಷಮತ್ಯಲ್ಪಸಾಧ್ಯಸಾಧನನಿಸ್ಪೃಹಂ ।
ತಚ್ಚಕ್ರಂ ಪ್ರಸ್ಫುರದ್ದೀಪ್ತಿ ವಿಷ್ಣೋರಭ್ಯಾಯಯೌ ಕರಂ ॥ ೪೩ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶ್ರೀಕೃಷ್ಣಚರಿತೇ ಪೌಂಡ್ರಕ-
ವಾಸುದೇವವಧೇ ಕಾಶೀದಾಹವರ್ಣನಂ ನಾಮ
ಸಪ್ತಾಧಿಕದ್ವಿಶತತಮೋಽಧ್ಯಾಯಃ

---

ಗಿಲುಗಳನ್ನೂ ತನ್ನ ಜ್ವಾಲಾಮಾಲೆಗಳಿಂದ ಆವರಿಸಿ, ಅತಿಶಯವಾದ ಕೋಪ ದಿಂದ ಕ್ಷಣಮಾತ್ರದಲ್ಲಿ ಸುಟ್ಟುಹಾಕಿಬಿಟ್ಟಿತು. ಬಳಿಕ ಆ ಅತಿತೇಜಸ್ವಿಯಾದ ಚಕ್ರವು ಮರಳಿ ಕೃಷ್ಣನ ಕೈಯನ್ನೇ ಸೇರಿಬಿಟ್ಟಿತು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಶ್ರೀಕೃಷ್ಣಚರಿತ್ರೆಯಲ್ಲಿ ಪೌಂಡ್ರಕವಾಸುದೇವ
ವಧೆ ಮತ್ತು ಕಾಶೀದಾಹವರ್ಣನವೆಂಬ ಇನ್ನೂರೇಳನೆಯ
ಅಧ್ಯಾಯವು ಮುಗಿಯುವುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಅಷ್ಟಾಧಿಕದ್ವಿಶತತಮೋಽಧ್ಯಾಯಃ

---

॥ ಮುನಯ ಊಚುಃ ॥

**ಶ್ರೋತುಮಿಚ್ಛಾಮಹೇ ಭೂಯೋ ಬಲಭದ್ರಸ್ಯ ಧೀಮತಃ ।**
**ಮುನೇ ಪರಾಕ್ರಮಂ ಶೌರ್ಯಂ ತನ್ನೋ ವ್ಯಾಖ್ಯಾತುಮರ್ಹಸಿ ॥ ೧ ॥**

**ಯಮುನಾಕರ್ಷಣಾದೀನಿ ಶ್ರುತಾನ್ಯಸ್ಮಾಭಿರತ್ರ ವೈ ।**
**ತತ್ಕಥ್ಯತಾಂ ಮಹಾಭಾಗ ಯದನ್ಯತ್ಕೃತವಾನ್ಬಲಃ ॥ ೨ ॥**

॥ ವ್ಯಾಸ ಉವಾಚ ॥

**ಶೃಣುಧ್ವಂ ಮುನಯಃ ಕರ್ಮ ಯದ್ರಾಮೇಣಾಭವತ್ಕೃತಂ ।**
**ಅನಂತೇನಾಪ್ರಮೇಯೇನ ಶೇಷೇಣ ಧರಣೀಭೃತಾ ॥ ೩ ॥**

---

### ಇನ್ನೂರೆಂಟನೆಯ ಅಧ್ಯಾಯವು

೧. ಮತ್ತೆ ಮುನಿಗಳು ವ್ಯಾಸನನ್ನು ಕುರಿತು "ಓ ಮುನೀಂದ್ರ! ಧೀಮಂತನಾದ ಬಲರಾಮನ ಶೌರ್ಯವನ್ನೂ ಪರಾಕ್ರಮವನ್ನೂ ಮರಳಿ ಕೇಳಬೇಕೆಂದಿದ್ದೇವೆ. ಅದನ್ನು ನಮಗೆ ತಿಳಿಸು.

೨. ಆ ಬಲರಾಮನು ಯಮುನಾನದಿಯನ್ನು ಸೆಳೆದುದನ್ನೂ ಇತರ ಸಂಗತಿಗಳನ್ನೂ ಕೇಳಿರುವೆವು. ಓ ಮಹಾತ್ಮ! ಆತನು ಮತ್ತೂ ಯಾವ ಕೆಲಸವನ್ನು ಮಾಡಿದನು? ತಿಳಿಸು" ಎಂದರು.

೩. ಆಗ ಅವರನ್ನು ಕುರಿತು ವ್ಯಾಸಮಹರ್ಷಿಯು ಹೇಳತೊಡಗಿದನು:- "ಎಲೈ ಮುನಿಗಳಿರಾ! ಅನಂತನೂ, ಅಪ್ರಮೇಯನೂ, ಶೇಷನೂ, ಭೂಮಿಯ ಭಾರವನ್ನು ತಳೆದಿರುವವನೂ ಆದ ಬಲರಾಮನು ಮಾಡಿದ ಮತ್ತೊಂದು ಸಾಹಸಕಾರ್ಯವನ್ನು ಹೇಳುವೆನು, ಕೇಳಿರಿ."

ದುರ್ಯೋಧನಸ್ಯ ತನಯಾಂ ಸ್ವಯಂವರಕೃತೇಕ್ಷಣಾಂ ।
ಬಲಾದಾದತ್ತವಾನ್ವೀರಃ ಸಾಂಬೋ ಜಾಂಬವತೀಸುತಃ ॥ ೪ ॥

ತತಃ ಕ್ರುದ್ಧಾ ಮಹಾವೀರ್ಯಾಃ ಕರ್ಣದುರ್ಯೋಧನಾದಯಃ ।
ಭೀಷ್ಮದ್ರೋಣಾದಯಶ್ಚೈವ ಬಬಂಧುರ್ಯುಧಿ ನಿರ್ಜಿತಂ ॥ ೫ ॥

ತಚ್ಛ್ರುತ್ವಾ ಯಾದವಾಃ ಸರ್ವೇ ಕ್ರೋಧಂ ದುರ್ಯೋಧನಾದಿಷು ।
ಮುನಯಃ ಪ್ರತಿಚಕ್ರುಶ್ಚ ತಾನ್ವಿಹಂತುಂ ಮಹೋದ್ಯಮಂ ॥ ೬ ॥

ತಾನ್ನಿವಾರ್ಯ ಬಲಃ ಪ್ರಾಹ ಮದಲೋಲಾಕುಲಾಕ್ಷರಂ ।
ಮೋಕ್ಷ್ಯಂತಿ ತೇ ಮದ್ವಚನಾದ್ಯಾಸ್ಯಾಮ್ಯೇಕೋ ಹಿ ಕೌರವಾನ್ ॥ ೭ ॥

---

೪. ಜಾಂಬವತೀ ಪುತ್ರನೂ ವೀರಾಗ್ರಣಿಯೂ ಆದ ಸಾಂಬನು ಸ್ವಯಂವರವನ್ನು ಮಾಡಬೇಕೆಂದು ಎಣಿಸಿದ್ದ ದುರ್ಯೋಧನನ ಮಗಳನ್ನು ಬಲಾತ್ಕಾರದಿಂದ ಎಳೆತಂದು ಬಿಟ್ಟನು.

೫. ಆಗ ಕರ್ಣ, ದುರ್ಯೋಧನ, ಭೀಷ್ಮ, ದ್ರೋಣ ಮುಂತಾದ ಕುರುವೀರರು ಮಹಾಕೋಪವನ್ನು ತಾಳಿ ಆ ಸಾಂಬನಮೇಲೇರಿ ಹೋಗಿ ಅವನನ್ನು ಯುದ್ಧದಲ್ಲಿ ಸೋಲಿಸಿ ಕಟ್ಟಿಹಾಕಿದರು. (ಸೆರೆಯಲ್ಲಿಟ್ಟರು)

೬. ಎಲೈ ಮುನಿಗಳಿರಾ! ಇದನ್ನು ಕೇಳಿದೊಡನೆಯೇ ಯಾದವರೆಲ್ಲರೂ ಮಹಾಕೋಪವನ್ನು ತಾಳಿ ಕೌರವರನ್ನು ನಾಶಮಾಡಬೇಕೆಂದೆಣಿಸಿ ದುರ್ಯೋಧನಾದಿಗಳಮೇಲೆ ದಂಡೆತ್ತಿ ಹೊರಡಲು ಭಾರಿ ಸನ್ನಾಹ ಮಾಡುತ್ತಿದ್ದರು.

೭. ಆಗ ಬಲರಾಮನು ಅವರೆಲ್ಲರನ್ನೂ ತಡೆದು, ಮದ್ಯದ ಅಮಲಿನಿಂದ ನಾಲಿಗೆಯು ಸರಿಯಾಗಿ ತಿರುಗದೆ ತೊದಲುತೊದಲಾಗಿ ಮಾತಾಡುತ್ತಾ "ಆ ಕೌರವರು ನನ್ನ ಮಾತು ಕೇಳಿದರೆ ಬಿಟ್ಟುಬಿಡುವರು. ಆದ್ದರಿಂದ ನಾನೊಬ್ಬನೇ ಹೋಗಿ ಬರುವೆನು" ಎಂದನು.

ಬಲದೇವಸ್ತತೋ ಗತ್ವಾ ನಗರಂ ನಾಗಸಾಹ್ವಯಂ ।
ಬಾಹ್ಯೋಪವನಮಧ್ಯೇಽಭೂನ್ನ ವಿವೇಶ ಚ ತತ್ಪುರಂ ॥ ೮ ॥

ಬಲಮಾಗತಮಾಜ್ಞಾಯ ತದಾ ದುರ್ಯೋಧನಾದಯಃ ।
ಗಾಮರ್ಘ್ಯಮುದಕಂ ಚೈವ ರಾಮಾಯ ಪ್ರತ್ಯವೇದಯನ್ ।
ಗೃಹೀತ್ವಾ ವಿಧಿವತ್ಸರ್ವಂ ತತಸ್ತಾನಾಹ ಕೌರವಾನ್ ॥ ೯ ॥

॥ ಬಲದೇವ ಉವಾಚ ॥

ಆಜ್ಞಾಪಯತ್ಯುಗ್ರಸೇನಃ ಸಾಂಬಮಾಶು ವಿಮುಂಚತ ॥ ೧೦ ॥

॥ ವ್ಯಾಸ ಉವಾಚ ॥

ತತಸ್ತದ್ವಚನಂ ಶ್ರುತ್ವಾ ಭೀಷ್ಮದ್ರೋಣಾದಯೋ ದ್ವಿಜಾಃ ।
ಕರ್ಣದುರ್ಯೋಧನಾದ್ಯಾಶ್ಚ ಚುಕ್ರುಧುರ್ದ್ವಿಜಸತ್ತಮಾಃ ॥ ೧೧ ॥

ಊಚುಶ್ಚ ಕುಪಿತಾಃ ಸರ್ವೇ ಬಾಹ್ಲಿಕಾದ್ಯಾಶ್ಚ ಭೂಮಿಪಾಃ ।
ಅರಾಜಾರ್ಹಂ ಯದೋರ್ವಂಶಮವೇಕ್ಷ್ಯ ಮುಶಲಾಯುಧಂ ॥ ೧೨ ॥

---

೮. ಅನಂತರ ಬಲರಾಮನು ಹಸ್ತಿನಾವತಿಗೆ ಹೋಗಿ ಅದರ ಬಳಿಯಿದ್ದ ಉದ್ಯಾನವೊಂದರಲ್ಲಿಯೇ ನಿಂತನು. ನಗರದೊಳಗೆ ಪ್ರವೇಶಿಸಲಿಲ್ಲ.

೯–೧೦. ಆಗ ಬಲರಾಮನು ಬಂದ ಸುದ್ದಿಯನ್ನು ಕೇಳಿ ದುರ್ಯೋಧನ ಮೊದಲಾದ ಕುರುವೀರರು, ಗೋವನ್ನೂ, ಪೂಜಾವಸ್ತುಗಳನ್ನೂ, ಶುದ್ಧೋದಕವನ್ನೂ ತೆಗೆದುಕೊಂಡುಹೋಗಿ ಆತನನ್ನು ಸತ್ಕರಿಸಿದರು. ಅವೆಲ್ಲವನ್ನೂ ವಿಧಿವತ್ತಾಗಿ ಸ್ವೀಕರಿಸಿದ ನಂತರ ಬಲರಾಮನು ಅವನನ್ನು ಕುರಿತು "ಉಗ್ರಸೇನನ ಆಜ್ಞೆಯಂತೆ ಸಾಂಬನನ್ನು ಬೇಗನೆ ಬಿಟ್ಟುಬಿಡಿ" ಎಂದು ತಿಳಿಸಿದನು.

೧೧. ಎಲೈ ಬ್ರಾಹ್ಮಣೋತ್ತಮರೇ! ಈ ಮಾತನ್ನು ಕೇಳಿದೊಡನೆಯೇ, ಭೀಷ್ಮದ್ರೋಣರೂ, ಕರ್ಣದುರ್ಯೋಧನಾದಿಗಳೂ ಬಹುವಾಗಿ ಕೋಪವನ್ನು ತಾಳಿದರು.

೧೨. ಆಗ ಅವರೂ, ಬಾಹ್ಲಿಕ ಮೊದಲಾದ ಅವರ ಕಡೆಯ ಇತರ ಅರಸರೂ ಬಲರಾಮನನ್ನು ನೋಡಿ ಕೋಪದಿಂದ ಹೇಳತೊಡಗಿದರು. ರಾಜರಾಗಲು ಯದುವಂಶದವರಿಗೆ ಅರ್ಹತೆಯೇ ಇಲ್ಲ.

॥ ಕೌರವಾ ಊಚುಃ ॥

ಭೋ ಭೋಃ ಕಿಮೇತದ್ಭವತಾ ಬಲಭದ್ರೇರಿತಂ ವಚಃ ।
ಆಜ್ಞಾಂ ಕುರುಕುಲೋತ್ಥಾನಾಂ ಯಾದವಃ ಕಃ ಪ್ರದಾಸ್ಯತಿ ॥ ೧೩ ॥

ಉಗ್ರಸೇನೋಽಪಿ ಯದ್ಯಾಜ್ಞಾಂ ಕೌರವಾಣಾಂ ಪ್ರದಾಸ್ಯತಿ ।
ತದಲಂ ಪಾಂಡುರೈಶ್ಛತ್ರೈರ್ನೃಪಯೋಗ್ಯೈರಲಂಕೃತೈಃ ॥ ೧೪ ॥

ತದ್ಗಚ್ಛ ಬಲಭದ್ರ ತ್ವಂ ಸಾಂಬಮನ್ಯಾಯಚೇಷ್ಟಿತಂ ।
ವಿಮೋಕ್ಷ್ಯಾಮೋ ನ ಭವತೋ ನೋಗ್ರಸೇನಸ್ಯ ಶಾಸನಾತ್ ॥ ೧೫ ॥

ಪ್ರಣತಿರ್ಯಾ ಕೃತಾಸ್ಮಾಕಂ ಮಾನ್ಯಾನಾಂ ಕುಕುರಾನ್ಧಕೈಃ ।
ನ ನಾಮ ಸಾ ಕೃತಾ ಕೇಯಮಾಜ್ಞಾ ಸ್ವಾಮಿನಿ ಭೃತ್ಯತಃ ॥ ೧೬ ॥

---

೧೩. ಓ ಬಲರಾಮ! ಇದೇನು ನೀನು ಹೇಳಿದ ಮಾತು? ಯದು ವಂಶದಲ್ಲಿ ಹುಟ್ಟಿದ ಯಾವನು ಕುರುಕುಲೋತ್ಪನ್ನರಾದ ಅರಸರಮೇಲೆ ತನ್ನ ಅಪ್ಪಣೆಯನ್ನು ಕೊಡುತ್ತಿರುವನು?

೧೪. ಉಗ್ರಸೇನನೂ ಕೂಡ ಕೌರವರಮೇಲೆ ತನ್ನ ಅಪ್ಪಣೆಯನ್ನು ನಡೆಸುವುದಾದರೆ, ರಾಜಯೋಗ್ಯವಾದೀ ಅಂದವಾದ ಶ್ವೇತಚ್ಛತ್ರಗಳು ಬರಿಯ ಅಲಂಕಾರಕ್ಕೋಸ್ಕರ ನಮ್ಮಮೇಲೇಕಿರಬೇಕು?

೧೫. ಆದುದರಿಂದ ಓ ಬಲಭದ್ರ! ನೀನು ಹಿಂದಿರುಗು. ಅಕಾರ್ಯ ಕಾರಿಯಾದೀ ಸಾಂಬನನ್ನು ನಿನ್ನ ಮಾತಿನಿಂದಾಗಲೀ, ಉಗ್ರಸೇನನ ಅಪ್ಪಣೆ ಯಿಂದಲಾಗಲೀ ನಾವು ಬಿಡಲಾರೆವು.

೧೬. ಗೌರವಾರ್ಹರಾದ ನಮಗೆ ಕುಕುಲರರೂ ಅಂಧಕರೂ ಹಿಂದಿ ನಿಂದಲೂ ನಮಸ್ಕರಿಸುತ್ತಾ ಬಂದಿಲ್ಲವೇ? ಆ ನಮಸ್ಕಾರವು ಮಾಡಲ್ಪಡಲಿಲ್ಲ ವೆಂದೇ ಭಾವಿಸಬೇಕಾಗಿದೆ. ಏಕೆಂದರೆ ಹೀಗೆ ಪ್ರಭುವಿನಮೇಲೆಯೇ ಸೇವಕನು ಅಪ್ಪಣೆ ಮಾಡುವುದೆಂದರೇನು?

ಗರ್ವಮಾರೋಪಿತಾ ಯೂಯಂ ಸಮಾನಾಸನಭೋಜನೈಃ ।
ಕೋ ದೋಷೋ ಭವತಾಂ ನೀತಿರ್ಯತ್ಪ್ರೀತ್ಯಾನಾತ್ಮನಪೇಕ್ಷಿತಾ ॥ ೧೭ ॥

ಅಸ್ಮಾಭಿರರ್ಘ್ಯೋ ಭವತಾ ಯೋಽಯಂ ಬಲ ನಿವೇದಿತಃ ।
ಪ್ರೇಮ್ಣೈವ ನ ತದಸ್ಮಾಕಂ ಕುಲಾದ್ಯುಷ್ಮತ್ಕುಲೋಚಿತಂ ॥ ೧೮ ॥

॥ ವ್ಯಾಸ ಉವಾಚ ॥

ಇತ್ಯುಕ್ತ್ವಾ ಕುರವಃ ಸರ್ವೇ ನಾಮುಂಚಂತ ಹರೇಃ ಸುತಂ ।
ಕೃತೈಕನಿಶ್ಚಯಾಃ ಸರ್ವೇ ವಿವಿಶುರ್ಗಜಸಾಹ್ವಯಂ ॥ ೧೯ ॥

ಮತ್ತಃ ಕೋಪೇನ ಚಾಘೂರ್ಣಂ ತತೋಽಧಿಕ್ಷೇಪಜನ್ಮನಾ ।
ಉತ್ಥಾಯ ಪಾರ್ಷ್ಣ್ಯಾ ವಸುಧಾಂ ಜಘಾನ ಸ ಹಲಾಯುಧಃ ॥ ೨೦ ॥

---

೧೭. ನಮಗೆ ಸರಿಸಮವಾಗಿ ನಿಮ್ಮನ್ನು ಕೂರಿಸಿಕೊಳ್ಳುತಿದ್ದುದರಿಂದಲೇ ನಿಮಗೆ ಅಹಂಕಾರವುಂಟಾಗಿರುವುದು. ಇರಲಿ, ನಿಮ್ಮದೇನು ತಪ್ಪು? ಜಾಗರೂಕತೆಯಂದಿಲ್ಲದಿದ್ದರೆ ಯಾರಾದರೂ ಹೆಚ್ಚಿಕೊಳ್ಳುವುದು ಸ್ವಭಾವ.

೧೮. ಓ ಬಲರಾಮ! ನಮ್ಮಿಂದ ಪೂಜೆಯನ್ನು ಕೈಗೊಳ್ಳುವೆವೆಂದು ಹೇಳಿದೆಯಲ್ಲವೆ? ಆರೀತಿ ಮಾಡಿದ ಪೂಜೆಯೆಲ್ಲವೂ (ಸತ್ಕಾರ) ಪ್ರೀತಿಯಿಂದಲೇ ವಿನಾ ನಮ್ಮ ಕುಲಕ್ಕಿಂತಲೂ ನಿಮ್ಮ ಕುಲವು ಹೆಚ್ಚೆಂದು ಮಾತ್ರ ಅಲ್ಲ ಎಂದರು.

೧೯. ಹೀಗೆ ಹೇಳಿ ಆ ಕೌರವರೆಲ್ಲರೂ ತಮ್ಮ ನಿರ್ಧಾರವನ್ನು ಸ್ವಲ್ಪವೂ ಬದಲುಮಾಡದೆ ಕೃಷ್ಣನ ಸುತನಾದ ಸಾಂಬನನ್ನು ಬಂಧನದಿಂದ ಬಿಡುಗಡೆ ಮಾಡಲೇ ಇಲ್ಲ. ಸುಮ್ಮನೆ ಹಸ್ತಿನಾವತಿಗೆ ಹಿಂದಿರುಗಿದರು.

೨೦. ಆಗ ಬಲರಾಮನು ಕೌರವರ ತಿರಸ್ಕಾರದಿಂದುಂಟಾದ ಕೋಪದಿಂದಲೂ, ಮದ್ಯದ ಅಮಲನಿಂದಲೂ ತೂರಾಡುತ್ತಾ ಎದ್ದುನಿಂತು ತನ್ನ ಹಿಮ್ಮಡಿಯಿಂದ ಒಂದುಬಾರಿ ನೆಲವನ್ನು ಗುದ್ದಿದನು.

ತತೋ ವಿದಾರಿತಾ ಪೃಥ್ವೀ ಪಾರ್ಷ್ಣಿಘಾತಾನ್ಮಹಾತ್ಮನಃ ।
ಆಸ್ಫೋಟಯಾಮಾಸ ತದಾ ದಿಶಃ ಶಬ್ದೇನ ಪೂರಯನ್ ।
ಉವಾಚ ಚಾತಿತಾಮ್ರಾಕ್ಷೋ ಭ್ರುಕುಟೀಕುಟಿಲಾನನಃ ॥ ೨೧ ॥

॥ ಬಲದೇವ ಉವಾಚ ॥

ಅಹೋ ಮಹಾವಲೇಪೋಽಯಮಸಾರಾಣಾಂ ದುರಾತ್ಮನಾಂ ।
ಕೌರವಾಣಾಮಾಧಿಪತ್ಯಮಸ್ಮಾಕಂ ಕಿಲ ಕಾಲಜಂ ॥ ೨೨ ॥

ಉಗ್ರಸೇನಸ್ಯ ಯೋ ನಾಜ್ಞಾಂ ಮನ್ಯಂತೇ ಚಾಪ್ಯಲಂಘನಾಂ ।
ಆಜ್ಞಾಂ ಪ್ರತೀಚ್ಛೇದ್ಧರ್ಮೇಣ ಸಹ ದೇವೈಃ ಶಚೀಪತಿಃ ॥ ೨೩ ॥

ಸದಾಧ್ಯಾಸ್ತೇ ಸುಧರ್ಮಾಂ ತಾಮುಗ್ರಸೇನಃ ಶಚೀಪತೇಃ ।
ಧಿಙ್ಮನುಷ್ಯಶತೋಚ್ಛಿಷ್ಟೇ ತುಷ್ಟಿರೇಷಾಂ ನೃಪಾಸನೇ ॥ ೨೪ ॥

---

೨೧. ಮಹಾತ್ಮನಾದ ಬಲರಾಮನ ಹಿಮ್ಮಡಿಯ ಹೊಡೆತದಿಂದ ನೆಲವು ಬಿರುಕುಬಿಟ್ಟಿತು. ಆಗ ಬಲರಾಮನು ದಿಕ್ಕುಗಳೆಲ್ಲವೂ ಧ್ವನಿಯಿಂದ ತುಂಬಿ ಹೋಗುವಂತೆ ತನ್ನ ತೋಳುಗಳನ್ನು ತಟ್ಟಿದನು. ಮತ್ತು ಕೆಂಪೇರಿದ ಕಂಗಳೂ, ಕುಟಿಲವಾದ ಹುಬ್ಬುಗಂಟಿನಿಂದ ಕೂಡಿದ ಮುಖವೂ ಉಳ್ಳವನಾಗಿ ಇಂತೆಂದು ಹೇಳಿದನು.

೨೨. ಆಹಾ! ದುರ್ಬಲರಾದ ಈ ದುಷ್ಟರಿಗೆ ಇಷ್ಟು ಅಹಂಕಾರವೇ? ನಮಗೇ ಸೇರಿದ್ದ ಈ ರಾಜ್ಯದ ಆಡಳಿತವು ಕಾಲವಶದಿಂದ ಈಗ ಕೌರವರಿಗೆ ಸೇರಿರುವುದು.

೨೩. ಉಗ್ರಸೇನನ ಆಜ್ಞೆಯು ಅಲಂಘನೀಯವಾದುದೆಂದು ಯಾರಿಗೆ ತಾನೇ ತಿಳಿಯದೆ ಇರುವುದು? ದೇವಾಧಿಪತಿಯಾದ ಇಂದ್ರನೂ ದೇವತೆಗಳೂ ಧರ್ಮದಿಂದ ಅವನ ಆಜ್ಞೆಯನ್ನು ಪಾಲಿಸುವರು.

೨೪. ಆ ಉಗ್ರಸೇನನು ದೇವೇಂದ್ರನ ಸಭೆಯಾದ ಸುಧರ್ಮೆಯೆಂಬ ಒಡ್ಡೋಲಗದಲ್ಲಿಯೇ ಸರ್ವದಾ ಇರುತ್ತಿರುವನು. ನೂರಾರುಮಂದಿ ಮನುಷ್ಯರಿಂದ ತುಳಿಯಲ್ಪಟ್ಟ ರಾಜಪೀಠವನ್ನು ಪಡೆದ ಮಾತ್ರದಿಂದಲೇ ಇವರಿಗೆ ಇಷ್ಟು ಸಂತೋಷವೇ? ಛೀ, ಛೀ.

ಪಾರಿಜಾತತರೋಃ ಪುಷ್ಪಮಂಜರೀರ್ವನಿತಾಜನಃ ।
ಬಿಭರ್ತಿ ಯಸ್ಯ ಭೃತ್ಯಾನಾಂ ಸೋಽಪ್ಯೇಷಾಂ ನ ಮಹೀಪತಿಃ ॥ ೨೫ ॥

ಸಮಸ್ತಭೂಭುಜಾಂ ನಾಥ ಉಗ್ರಸೇನಃ ಸ ತಿಷ್ಠತು ।
ಅದ್ಯ ನಿಷ್ಕೌರವಾಮುರ್ವೀಂ ಕೃತ್ವಾ ಯಾಸ್ಯಾಮಿ ತಾಂ ಪುರೀಂ ॥ ೨೬ ॥

ಕರ್ಣಂ ದುರ್ಯೋಧನಂ ದ್ರೋಣಮದ್ಯ ಭೀಷ್ಮಂ ಸಬಾಹ್ಲಿಕಂ ।
ದುಃಶಾಸನಾದೀನ್ಭೂರಿಂ ಚ ಭೂರಿಶ್ರವಸಮೇವ ಚ ॥ ೨೭ ॥

ಸೋಮದತ್ತಂ ಶಲಂ ಭೀಮಮರ್ಜುನಂ ಸಯುಧಿಷ್ಠಿರಂ ।
ಯಮಜೌ ಕೌರವಾಂಶ್ಚಾನ್ಯಾನ್ಹನ್ಯಾಂ ಸಾಶ್ವರಥದ್ವಿಪಾನ್ ॥ ೨೮ ॥

ವೀರಮಾದಾಯ ತಂ ಸಾಂಬಂ ಸಪತ್ನೀಕಂ ತತಃ ಪುರೀಂ ।
ದ್ವಾರಕಾಮುಗ್ರಸೇನಾದೀನ್ಗತ್ವಾ ದ್ರಕ್ಷ್ಯಾಮಿ ಬಾಂಧವಾನ್ ॥ ೨೯ ॥

---

೨೫. ಯಾವಾತನನ್ನು ಸೇವಿಸುವ ಊಳಿಗದವರ ಹೆಂಡತಿಯರೂ ಸಹ ಪಾರಿಜಾತ ತರುವಿನ ಹೂವಿನ ಗೊಂಚಲುಗಳನ್ನು ಧರಿಸುವರೋ ಅಂತಹ ಉಗ್ರಸೇನನು ಇವರಿಗೆ ರಾಜನಲ್ಲವೇ ?

೨೬. ಸಕಲ ರಾಜರಿಗೂ ಅಧಿಪತಿಯೆನಿಸಿದ ಆ ಉಗ್ರಸೇನನು ಇರಲಿ. ನಾನೇ ಈಕ್ಷಣದಲ್ಲಿ, ಭೂಮಿಯಲ್ಲಿ ಕೌರವರೇ ಇಲ್ಲವೆನ್ನುವಂತೆ ಮಾಡಿ ದ್ವಾರಕಿಗೆ ಹೊರಡುವೆನು.

೨೭–೨೮. ಕರ್ಣ, ದುರ್ಯೋಧನ, ದ್ರೋಣ, ಭೀಷ್ಮ, ಬಾಹ್ಲಿಕ, ದುಶ್ಯಾಸನ, ಭೂರಿ, ಭೂರಿಶ್ರವಸ್ಸು, ಸೋಮದತ್ತ, ಶಲ, ಭೀಮ, ಅರ್ಜುನ, ಯುಧಿಷ್ಠಿರ, ನಕುಲ, ಸಹದೇವ ಮತ್ತು ಇತರ ಕೌರವರು, ಇವರೆಲ್ಲರನ್ನೂ ಆನೆ, ಕುದುರೆ, ತೇರು ಮುಂತಾದ ಸೈನ್ಯಸಮೇತವಾಗಿ ಸಂಹರಿಸಿಬಿಡುವೆನು.

೨೯. ಬಳಿಕ ವೀರನಾದ ಸಾಂಬನನ್ನು ಅವನ ಪತ್ನಿಯೊಡನೆ ದ್ವಾರಕಿಗೆ ಕರೆದುಕೊಂಡುಹೋಗಿ ಉಗ್ರಸೇನನೇ ಮೊದಲಾದ ಬಂಧುಗಳನ್ನು ಕಾಣುವೆನು.

**ಅಥವಾ ಕೌರವಾದೀನಾಂ ಸಮಸ್ತೈಃ ಕುರುಭಿಃ ಸಹ ।**
**ಭಾರಾವತರಣೇ ಶೀಘ್ರಂ ದೇವರಾಜೇನ ಚೋದಿತಃ ॥ ೩೦ ॥**
**ಭಾಗೀರಥ್ಯಾಂ ಕ್ಷಿಪಾಮ್ಯಾಶು ನಗರಂ ನಾಗಸಾಹ್ವಯಂ ॥ ೩೧ ॥**

**॥ ವ್ಯಾಸ ಉವಾಚ ॥**

**ಇತ್ಯುಕ್ತ್ವಾ ಕ್ರೋಧರಕ್ತಾಕ್ಷಸ್ತಾಲಾಂಕೋಽಧೋಮುಖಂ ಹಲಂ ।**
**ಪ್ರಾಕಾರವಪ್ರೇ ವಿನ್ಯಸ್ಯ ಚಕರ್ಷ ಮುಶಲಾಯುಧಃ ॥ ೩೨ ॥**

**ಆಘೂರ್ಣಿತಂ ತತ್ಸಹಸಾ ತತೋ ವೈ ಹಸ್ತಿನಾಪುರಂ ।**
**ದೃಷ್ಟ್ವಾ ಸಂಕ್ಷುಬ್ಧಹೃದಯಾಶ್ಚುಕ್ರುಶುಃ ಸರ್ವಕೌರವಾಃ ॥ ೩೩ ॥**

**॥ ಕೌರವಾ ಊಚುಃ ॥**

**ರಾಮ ರಾಮ ಮಹಾಬಾಹೋ ಕ್ಷಮ್ಯತಾಂ ಕ್ಷಮ್ಯತಾಂ ತ್ವಯಾ ।**
**ಉಪಸಂಹ್ರಿಯತಾಂ ಕೋಪಃ ಪ್ರಸೀದ ಮುಶಲಾಯುಧ ॥ ೩೪ ॥**

---

೩೦–೩೧. ಇಲ್ಲದಿದ್ದರೆ ಇಂದ್ರನ ಅಪೇಕ್ಷೆಯಂತೆ ಭೂಭಾರವನ್ನು ಇಳಿಸುವ ಸಲುವಾಗಿ, ಕೌರವರಾಜಧಾನಿಯಾದ ಹಸ್ತಿನಾವತಿಯನ್ನು ಎಲ್ಲ ಕುರುಗಳೊಂದಿಗೆ ಗಂಗೆಯಲ್ಲಿ ಮುಳುಗಿಸಿಬಿಡುವೆನು

೩೨. ಎಲೈ ಮುನಿಗಳಿರಾ! ಈರೀತಿಯಾಗಿ ಹೇಳುತ್ತಾ ಕೋಪದಿಂದ ಕೆಂಪೇರಿದ ಕಣ್ಣುಗಳುಳ್ಳ ಬಲರಾಮನು ಹಸ್ತಿನಾವತಿಯ ಕೋಟೆಯ ಸಾಲಿಗೆ ತನ್ನ ನೇಗಿಲನ್ನು ಕೆಳಮುಖವಾಗಿ ಬೀಸಿ ಹೊಡೆದು ಎಳೆಯತೊಡಗಿದನು.

೩೩. ಕೂಡಲೇ ಹಸ್ತಿನಾವತಿಯೆಲ್ಲವೂ ತಟಕ್ಕನೆ ಅಲ್ಲಾಡತೊಡಗಿತು. ಅದನ್ನು ಕಂಡು ಕೌರವರೆಲ್ಲರೂ ಭಯದಿಂದ ತಲ್ಲಣಿಸುತ್ತಾ ಗಟ್ಟಿಯಾಗಿ ಕಿರಿಚಿಕೊಂಡರು.

೩೪. ಆಗ ಕೌರವರು, ಓ ರಾಮ! ಓ ಮಹಾ ಬಾಹೂ! ಕ್ಷಮಿಸು, ಕ್ಷಮಿಸು. ಓ ಮುಸಲಾಯುಧ, ಪ್ರಸನ್ನನಾಗು. ನಿನ್ನೀ ಕೋಪವನ್ನು ಶಮನಗೊಳಿಸಿಕೋ.

ಏಷ ಸಾಂಬಃ ಸಪತ್ನೀಕಸ್ತವ ನಿರ್ಯಾತಿತೋ ಬಲ ।
ಅವಿಜ್ಞಾತಪ್ರಭಾವಾಣಾಂ ಕ್ಷಮ್ಯತಾಮಪರಾಧಿನಾಂ ॥ ೩೫ ॥

॥ ವ್ಯಾಸ ಉವಾಚ ॥

ತತೋ ನಿರ್ಯಾತಯಾಮಾಸುಃ ಸಾಂಬಂ ಪತ್ನ್ಯಾ ಸಮನ್ವಿತಂ ।
ನಿಷ್ಕ್ರಮ್ಯ ಸ್ವಪುರೀಂ ತೂರ್ಣಂ ಕೌರವಾ ಮುನಿಸತ್ತಮಾಃ ॥ ೩೬ ॥

ಭೀಷ್ಮದ್ರೋಣಕೃಪಾದೀನಾಂ ಪ್ರಣಮ್ಯ ವದತಾಂ ಪ್ರಿಯಂ ।
ಕ್ಷಾಂತಮೇವ ಮಯೇತ್ಯಾಹ ಬಲೋ ಬಲವತಾಂ ವರಃ ॥ ೩೭ ॥

ಅದ್ಯಾಪ್ಯಾಘೂರ್ಣಿತಾಕಾರಂ ಲಕ್ಷ್ಯತೇ ತತ್ಪುರಂ ದ್ವಿಜಾಃ ।
ಏಷ ಪ್ರಭಾವೋ ರಾಮಸ್ಯ ಬಲಶೌರ್ಯವತೋ ದ್ವಿಜಾಃ ॥ ೩೮ ॥

---

೩೫. ಓ ಬಲದೇವ ! ಇದೋ ನಿನ್ನ ಸಾಂಬನು ತನ್ನ ಪತ್ನಿಯೊಂದಿಗೆ ನಿನಗೆ ಹಿಂದಿರುಗಿ ಒಪ್ಪಿಸಲ್ಪಟ್ಟಿರುವನು. ನಿನ್ನ ಮಹಿಮೆಯನ್ನರಿಯದೆ ತಪ್ಪು ಮಾಡಿದ ನಮ್ಮ ಅಪರಾಧವನ್ನು ಮನ್ನಿಸು ಎಂದು ಬೇಡಿದರು.

೩೬. ಎಲೈ ಮುನಿಗಳಿರಾ ! ಬಳಿಕ ಆ ಕೌರವರು ಜಾಗ್ರತೆಯಾಗಿ ತಮ್ಮ ಊರಿಗೆ ಹೋಗಿ ಆ ಸಾಂಬನನ್ನು ಅವನ ಪತ್ನಿಯೊಂದಿಗೆ ಬಲದೇವನಿಗೆ ಒಪ್ಪಿಸಿದರು.

೩೭. ಆಗ ಭೀಷ್ಮ, ದ್ರೋಣ, ಕೃಪ ಮೊದಲಾದ ಕುರುವೀರರು ನಮಸ್ಕಾರಮಾಡಿ ತನ್ನೊಡನೆ ಪ್ರಿಯವಾಕ್ಯಗಳನ್ನು ಆಡತೊಡಗಿದುದನ್ನು ಕಂಡು ಪರಾಕ್ರಮಶಾಲಿಯಾದ ಬಲರಾಮನು 'ನಿಮ್ಮ ತಪ್ಪನ್ನು ಮನ್ನಿಸಿದೆನು' ಎಂದನು.

೩೮. ಎಲೈ ಬ್ರಾಹ್ಮಣೋತ್ತಮರಿರಾ ! ಈಗಲೂ ಸಹ ಆ ಹಸ್ತಿನಾವತಿಯು ಸ್ವಲ್ಪ ಅಲ್ಲಾಡಿದಂತೆಯೇ ಇದೆ. ಇದೀಗ ಬಲಾಢ್ಯನೂ ಶೂರನೂ ಆದ ಬಲರಾಮನ ವೃತ್ತಾಂತವು.

ತತಸ್ತು ಕೌರವಾಃ ಸಾಂಬಂ ಸಂಪೂಜ್ಯ ಹಲಿನಾ ಸಹ ।
ಪ್ರೇಷಯಾಮಾಸುರುದ್ವಾಹಧನಭಾರ್ಯಾಸಮನ್ವಿತಂ ॥ ೩೯ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶ್ರೀಕೃಷ್ಣಚರಿತೇ ಬಲದೇವ-
ಮಾಹಾತ್ಮ್ಯನಿರೂಪಣಂ ನಾಮಾಷ್ಟಾಧಿಕದ್ವಿಶತತಮೋಽಧ್ಯಾಯಃ

---

೩೯. ಅನಂತರ ಕೌರವರು ಬಲರಾಮನೊಂದಿಗೆ ಸಾಂಬನನ್ನು ಸತ್ಕರಿಸಿ, ವಿವಾಹದ ಬಳುವಳಿಯ ಹಣವನ್ನೂ, ಪತ್ನಿಯನ್ನೂ ಜೊತೆಯಲ್ಲಿಯೇ ಕಳುಹಿಸಿದರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಬಲದೇವಮಾಹಾತ್ಮ್ಯನಿರೂಪಣವೆಂಬ
ಇನ್ನೂರೆಂಟನೆಯ ಅಧ್ಯಾಯವು ಮುಗಿದುದು.



ಶ್ರೀಃ

---

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ನವಾಧಿಕದ್ವಿಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಶೃಣುಧ್ವಂ ಮುನಯಃ ಸರ್ವೇ ಬಲಸ್ಯ ಬಲಶಾಲಿನಃ ।
ಕೃತಂ ಯದನ್ಯದೇವಾಭೂತ್ತದಪಿ ಶ್ರೂಯತಾಂ ದ್ವಿಜಾಃ ॥ ೧ ॥

ನರಕಸ್ಯಾಸುರೇಂದ್ರಸ್ಯ ದೇವಪಕ್ಷವಿರೋಧಿನಃ ।
ಸಖಾಭವನ್ಮಹಾವೀರ್ಯೋ ದ್ವಿವಿದೋ ನಾಮ ವಾನರಃ ॥ ೨ ॥

ವೈರಾನುಬಂಧಂ ಬಲವಾನ್ಸ ಚಕಾರ ಸುರಾನ್ಪ್ರತಿ ॥ ೩ ॥

---

## ಇನ್ನೂರೊಂಭತ್ತನೆಯ ಅಧ್ಯಾಯವು

೧. ಎಲೈ ಮುನಿಗಳಿರಾ! ಆ ಬಲಾಢ್ಯನಾದ ಬಲರಾಮನು ಇನ್ನೂ ಯಾವ ಕಾರ್ಯವನ್ನು ಮಾಡಿದನೋ ಅದನ್ನೂ ಸಹ ನೀವೆಲ್ಲರೂ ಕೇಳಿರಿ.

೨-೩. ದೇವವೈರಿಯೂ ಅಸುರಾಧಿಪತಿಯೂ ಆದ ನರಕನಿಗೆ ಬಲಿಷ್ಠನಾದ ದ್ವಿವಿದನೆಂಬ ವಾನರನು ಸ್ನೇಹಿತನಾಗಿದ್ದನು. ಅವನು ದೇವತೆಗಳ ಮೇಲೆ ವೈರವನ್ನು ಬೆಳೆಸಿಕೊಂಡು ಬಂದನು.

॥ ದ್ವಿವಿದ ಉವಾಚ ॥

ನರಕಂ ಹತವಾನ್ಕೃಷ್ಣೋ ಬಲದರ್ಪಸಮನ್ವಿತಂ ।
ಕರಿಷ್ಯೇ ಸರ್ವದೇವಾನಾಂ ತಸ್ಮಾದೇಷ ಪ್ರತಿಕ್ರಿಯಾಂ ॥ ೪ ॥

॥ ವ್ಯಾಸ ಉವಾಚ ॥

ಯಜ್ಞವಿಧ್ವಂಸನಂ ಕುರ್ವನ್ಮರ್ತ್ಯಲೋಕಕ್ಷಯಂ ತಥಾ ।
ತತೋ ವಿಧ್ವಂಸಯಾಮಾಸ ಯಜ್ಞಾನಜ್ಞಾನಮೋಹಿತಃ ॥ ೫ ॥

ಬಿಭೇದ ಸಾಧುಮರ್ಯಾದಾಂ ಕ್ಷಯಂ ಚಕ್ರೇ ಚ ದೇಹಿನಾಂ ।
ದದಾಹ ಚಪಲೋ ದೇಶಂ ಪುರಗ್ರಾಮಾಂತರಾಣಿ ಚ ॥ ೬ ॥

ಕ್ವಚಿಚ್ಚ ಪರ್ವತಕ್ಷೇಪಾದ್ಗ್ರಾಮಾದೀನ್ಸಮಚೂರ್ಣಯತ್ ।
ಶೈಲಾನುತ್ಪಾಟ್ಯ ತೋಯೇಷು ಮುಮೋಚಾಂಬುನಿಧೌ ತಥಾ ॥ ೭ ॥

---

೪. ದ್ವಿವಿದನು ಬಲದಿಂದಲೂ ದರ್ಪದಿಂದಲೂ ಕೂಡಿದ್ದ ನರಕಾಸುರನನ್ನು ಶ್ರೀಕೃಷ್ಣನು ಕೊಂದನಲ್ಲವೇ ? ಆದುದರಿಂದ (ಆರೀತಿ ಹುರಿದುಂಬಿಸಿದ) ದೇವತೆಗಳಿಗೆ ಪ್ರತೀಕಾರಮಾಡುವೆನು ಎಂದುಕೊಂಡನು.

೫. ಎಲೈ ಮುನಿಗಳಿರಾ, ಅಜ್ಞಾನದಿಂದ ಮೋಹಿತನಾದ ದ್ವಿವಿದನು ಯಜ್ಞಗಳನ್ನು ಧ್ವಂಸಮಾಡುತ್ತಲೂ ಭೂಲೋಕವನ್ನು ಹಾಳುಮಾಡುತ್ತಲೂ ಇದ್ದನು.

೬. ಆ ಚಪಲಕಪಿಯು ಸಾಧುಗಳ ವರ್ತನೆಯನ್ನು ಮುರಿದು (ತೊರೆದು) ಸಿಕ್ಕಿದ ಜೀವಿಗಳನ್ನು ಕೊಲ್ಲುತ್ತಾ ಊರುಗಳಿಗೂ ಹಳ್ಳಿಗಳಿಗೂ ದೇಶಗಳಿಗೂ ಬೆಂಕಿಯನ್ನು ಹಚ್ಚುತ್ತಾ ಇದ್ದನು.

೭. ಒಂದುಕಡೆ ಬೆಟ್ಟಗಳನ್ನು ತಂದು ಮೇಲೆಹಾಕಿ ಊರೂರುಗಳನ್ನು ನಾಶಮಾಡುವನು. ಇನ್ನೊಂದುಕಡೆ ಪರ್ವತಗಳನ್ನು ಕಿತ್ತು ಸಮುದ್ರಜಲದಲ್ಲಿ ಎತ್ತಿಹಾಕುವನು.

ಪುನಶ್ಚಾರ್ಣವಮಧ್ಯಸ್ಥಃ ಕ್ಷೋಭಯಾಮಾಸ ಸಾಗರಂ ।
ತೇನಾತಿಕ್ಷೋಭಿತಶ್ಚಾಬ್ಧಿರುದ್ವೇಲೋ ಜಾಯತೇ ದ್ವಿಜಾಃ ॥ ೮ ॥

ಪ್ಲಾವಯಂಸ್ತೀರಜಾನ್ಗ್ರಾಮಾನ್ಪುರಾದೀನತಿವೇಗವಾನ್ ।
ಕಾಮರೂಪಂ ಮಹಾರೂಪಂ ಕೃತ್ವಾ ಸಸ್ಯಾನ್ಯನೇಕಶಃ ॥ ೯ ॥

ಲುಠನ್ಭ್ರಮಣಸಂಮರ್ದೈಃ ಸಂಚೂರ್ಣಯತಿ ವಾನರಃ ।
ತೇನ ವಿಪ್ರಕೃತಂ ಸರ್ವಂ ಜಗದೇತದ್ದುರಾತ್ಮನಾ ॥ ೧೦ ॥

ನಿಃಸ್ವಾಧ್ಯಾಯವಷಟ್ಕಾರಂ ದ್ವಿಜಾಶ್ಚಾಸೀತ್ಸುದುಃಖಿತಂ ।
ಕದಾಚಿದ್ರೈವತೋದ್ಯಾನೇ ಪಪೌ ಪಾನಂ ಹಲಾಯುಧಃ ॥ ೧೧ ॥

ರೇವತೀ ಚ ಮಹಾಭಾಗಾ ತಥೈವಾನ್ಯಾ ವರಸ್ತ್ರಿಯಃ ।
ಉದ್ಗೀಯಮಾನೋ ವಿಲಸಲ್ಲಲನಾಮೌಲಿಮಧ್ಯಗಃ ॥ ೧೨ ॥

---

೮. ಇದೂ ಅಲ್ಲದೆ ದ್ವಿವಿದನು ಸಾಗರದ ನೀರಿನೊಳಗೆ ಮುಳುಗಿ ಸಮುದ್ರವನ್ನೆಲ್ಲಾ ಅಲ್ಲೋಲಕಲ್ಲೋಲಮಾಡುವನು. ಎಲೈ ಬ್ರಾಹ್ಮಣೋತ್ತಮರಿರಾ, ಇದರಿಂದ ಸಮುದ್ರವು ಕಲಕಲ್ಪಟ್ಟು ತನ್ನ ತೀರದ ಅಂಚನ್ನು ದಾಟಿ ಹರಿಯುವುದು.

೯-೧೦. ಇದರಿಂದ ಸಾಗರದ ಕರೆಯಲ್ಲಿರುವ ಊರುಗಳೂ ಹಳ್ಳಿಪಳ್ಳಿಗಳೂ, ಕೊಚ್ಚಿಹೋಗುವುವು. ಇದೂ ಅಲ್ಲದೆ ಆ ಕಪಿಯು ತನ್ನ ಇಚ್ಛೆಬಂದಂತೆ ಬೃಹದಾಕಾರವನ್ನು ತಾಳುತ್ತಾ ಮಹಾವೇಗದಿಂದ ಹೊಲಗದ್ದೆಗಳಲ್ಲಿ ಹೊರಳಾಡುತ್ತಾ ಅಲ್ಲಿರುವ ಪೈರುಗಳೆಲ್ಲವನ್ನೂ ತನ್ನ ಉರುಳಾಟದ ಜೋರಿನಿಂದ ಅರೆದು ಪುಡಿಪುಡಿ ಮಾಡುವುದು. ಆ ದುಷ್ಟನಿಂದ ಜಗತ್ತೆಲ್ಲವೂ ಈರೀತಿ ಬವಣೆಗೊಳಗಾಗಿರುವುವು.

೧೧. ಎಲೈ ದ್ವಿಜರೇ, ಹೀಗಾಗಿ ವೇದಾಧ್ಯಯನಕ್ಕೂ ವಷಟ್ಕಾರಗಳಿಗೂ ಹಾನಿಯೊದಗಿರುವುದು. ಒಂದಾನೊಂದು ಸಲ ಬಲರಾಮನು ರೈವತೋದ್ಯಾನಕ್ಕೆ ತೆರಳಿ ಅಲ್ಲಿ ಮಧುವನ್ನು ಸೇವಿಸಿದನು.

೧೨-೧೩. ಅವನ ಜೊತೆಯಲ್ಲಿ ಸೌಭಾಗ್ಯಶಾಲಿನಿಯಾದ ರೇವತಿಯೂ ಇನ್ನೂ ಇತರ ಉತ್ತಮಾಂಗನೆಯರೂ ಮಧುಪಾನ ಮಾಡಿದರು. ಆ ಬಲ

ರೇಮೇ ಯದುವರಶ್ರೇಷ್ಠಃ ಕುಬೇರ ಇವ ಮಂದರೇ ।
ತತಃ ಸ ವಾನರೋಽಭ್ಯೇತ್ಯ ಗೃಹೀತ್ವಾ ಸೀರಿಣೋ ಹಲಂ ॥ ೧೩ ॥

ಮುಶಲಂ ಚ ಚಕಾರಾಸ್ಯ ಸಂಮುಖಃ ಸ ವಿಡಂಬನಾಂ ।
ತಥೈವ ಯೋಷಿತಾಂ ತಾಸಾಂ ಜಹಾಸಾಭಿಮುಖಂ ಕಪಿಃ ॥ ೧೪ ॥

ಪಾನಪೂರ್ಣಾಂಶ್ಚ ಕರಕಾಂಶ್ಚಿಕ್ಷೇಪಾಹತ್ಯ ವೈ ತದಾ ।
ತತಃ ಕೋಪಪರೀತಾತ್ಮಾ ಭರ್ತ್ಸಯಾಮಾಸ ತಂ ಬಲಂ ॥ ೧೫ ॥

ತಥಾಪಿ ತಮವಜ್ಞಾಯ ಚಕ್ರೇ ಕಿಲಕಿಲಾಧ್ವನಿಂ ।
ತತಃ ಸಮುತ್ಥಾಯ ಬಲೋ ಜಗೃಹೇ ಮುಶಲಂ ರುಷಾ ॥ ೧೬ ॥

---

ರಾಮನು ಮಂದರಪರ್ವತದಲ್ಲಿ ! ಕುಬೇರನು ವಿಹರಿಸುವಂತೆ ಸಂತೋಷದಿಂದ ವಿಹರಿಸುತ್ತಾ ಲಲನೆಯರ ನಡುವೆ ಸೇರಿ, ಅವರೆಲ್ಲರೂ ತನ್ನ ಕೀರ್ತಿಯನ್ನು ಹಾಡುತ್ತಿರಲು ಸಂತೋಷದಿಂದ ಮೆರೆಯುತ್ತಿದ್ದನು.

೧೪. ಹಿಂದೆ ಹೇಳಿದ ದ್ವಿವಿದನೆಂಬ ವಾನರನು ಅಲ್ಲಿಗೆ ಬಂದು ಬಲರಾಮನ ನೇಗಿಲನ್ನೂ ಮುಸಲವನ್ನೂ (ಒನಕೆ) ಹಿಡಿದು ಅವನ ಎದುರಿಗೆ ನಿಂತು ಅಣಕಿಸಿದುದಲ್ಲದೆ ಆತನ (ಬಲಭದ್ರನ) ವಿಲಾಸಿನಿಯರೆದುರಿಗೆ ಗಟ್ಟಿಯಾಗಿ ನಕ್ಕನು.

೧೫-೧೬. ಅಷ್ಟಕ್ಕೇ ಸುಮ್ಮನಾಗದೆ ಆ ಕಪಿಯು ಮಹಾಕೋಪದಿಂದ ಮಧುವನ್ನು ತುಂಬಿ ಇಟ್ಟಿದ್ದ ಪಾನಪಾತ್ರೆಗಳನ್ನು ನೆಲಕ್ಕೆ ಕುಕ್ಕಿ ಬಿಸಾಡಿದುದಲ್ಲದೆ ಬಲರಾಮನನ್ನು ಗದರಿಸಿಯೂ ಗದರಿಸಿದನು ಮತ್ತು ಅವನನ್ನು ಲೆಕ್ಕಿಸದೆ ಗಟ್ಟಿಯಾಗಿ ಕಿಲುಕಿಲವೆಂದು ಗಲಭೆಮಾಡಿದನು. ಅದನ್ನು ಕಂಡು ಬಲರಾಮನಿಗೆ ಕೋಪವುಂಟಾಗಿ ಕುಳಿತಲ್ಲಿಂದ ಝುಗ್ಗನೆದ್ದು ತನ್ನ ಮುಸಲವನ್ನು ಕೈಗೆ ತೆಗೆದುಕೊಂಡನು.

**ಸೋಽಪಿ ಶೈಲಶಿಲಾಂ ಭೀಮಾಂ ಜಗ್ರಾಹ ಪ್ಲವಗೋತ್ತಮಃ ।**
**ಚಿಕ್ಷೇಪ ಚ ಸ ತಾಂ ಕ್ಷಿಪ್ತಾಂ ಮುಶಲೇನ ಸಹಸ್ರಧಾ ॥ ೧೭ ॥**

**ಬಿಭೇದ ಯಾದವಶ್ರೇಷ್ಠಃ ಸಾ ಪಪಾತ ಮಹೀತಲೇ ।**
**ಆಪತನ್ಮುಶಲಂ ಚಾಸೌ ಸಮುಲ್ಲಂಘ್ಯ ಪ್ಲವಂಗಮಃ ॥ ೧೮ ॥**

**ವೇಗೇನಾಯಮ್ಯ ರೋಷೇಣ ಬಲೇನೋರಸ್ಯತಾಡಯತ್ ।**
**ತತೋ ಬಲೇನ ಕೋಪೇನ ಮುಷ್ಟಿನಾ ಮೂರ್ಧ್ನಿ ತಾಡಿತಃ ॥ ೧೯ ॥**

**ಪಪಾತ ರುಧಿರೋದ್ಗಾರೀ ದ್ವಿವಿದಃ ಕ್ಷೀಣಜೀವಿತಃ ।**
**ಪತತಾ ತಚ್ಛರೀರೇಣ ಗಿರೇಃ ಶೃಂಗಮಶೀರ್ಯತ ॥ ೨೦ ॥**

**ಮುನಯಃ ಶತಧಾ ವಜ್ರಿವಜ್ರೇಣೇವ ಹಿ ತಾಡಿತಂ ।**
**ಪುಷ್ಪವೃಷ್ಟಿಂ ತತೋ ದೇವಾ ರಾಮಸ್ಯೋಪರಿ ಚಿಕ್ಷಿಪುಃ ॥ ೨೧ ॥**

---

೧೭- ಆಗ ಕಪಿಶ್ರೇಷ್ಠನು ಬಹು ಭಯಂಕರವಾದ ಬಂಡೆಯೊಂದನ್ನು ಸಮೀಪದ ಬೆಟ್ಟದಿಂದ ತೆಗೆದುಕೊಂಡು ಅದನ್ನು ಬಲರಾಮನ ಮೇಲೆ ಬೀಸಿದನು. ಆಗ ಬಲಭದ್ರನು ತನ್ನ ಮುಸಲದಿಂದ ಆ ಬಂಡೆಯನ್ನು ಸಾವಿರ ಪಾಲಾಗುವಂತೆ ಸೀಳಿಬಿಟ್ಟನು.

೧೮-೧೯. ಯಾದವ ಶ್ರೇಷ್ಠನಾದ ಬಲರಾಮನಿಂದ ಸೀಳಲ್ಪಟ್ಟ ಆ ಬಂಡೆಯು ವ್ಯರ್ಥವಾದ ನೆಲದ ಮೇಲೆ ಬಿದ್ದಿತು. ಆಗ ದ್ವಿವಿದನು ಛಂಗನೆ ಹಾರಿ ಬಲರಾಮನ ಮುಸಲದ ಮೇಲೆ ಬಿದ್ದನು. ಮತ್ತು ಮುಷ್ಟಿಯನ್ನು ಕಟ್ಟಿ ಜೋರಾಗಿ ಅವನ ಎದೆಯಮೇಲೆ ಗುದ್ದಿದನು. ಆಗ ಬಲರಾಮನಿಗೂ ಕೋಪವು ಉಕ್ಕೇರಿ ಅವನು ಮುಷ್ಟಿಯಿಂದ ದ್ವಿವಿದನ ತಲೆಯಮೇಲೆ ಹೊಡೆದನು.

೨೦. ಆ ಏಟನ್ನು ತಡೆಯಲಾರದೆ ದ್ವಿವಿದನು ರಕ್ತವನ್ನು ಕಕ್ಕುತ್ತಾ ಸ್ವಲ್ಪಹೊತ್ತಿನಲ್ಲಿ ಪ್ರಾಣವನ್ನು ನೀಗಿದನು. ಆ ದ್ವಿವಿದನು ಸತ್ತನಂತರ ಅವನ ದೇಹವು ಬಿದ್ದ ಜೋರಿಗೆ ಬೆಟ್ಟದ ಕೋಡು ಇಂದ್ರನ ವಜ್ರಾಯುಧದ ಪ್ರಹಾರ ದಿಂದ ಬೀಳುವಂತೆ ಮುರಿದು ಬಿದ್ದಿತು.

೨೧-೨೨. ಎಲೈ ಮುನಿಗಳಿರಾ! ಆಗ ದೇವತೆಗಳು ಬಲರಾಮನಮೇಲೆ ಪುಷ್ಪವರ್ಷವನ್ನು ಸುರಿಸಿದರು ಮತ್ತು ಆತನ ಬಳಿಗೆ ಬಂದು ಓ ವೀರಾಗ್ರಣೀ!

ಪ್ರಶಶಂಸುಸ್ತದಾಭ್ಯೇತ್ಯ ಸಾಧ್ವೇತತ್ತೇ ಮಹತ್ಕೃತಂ ।
ಅನೇನ ದುಷ್ಟಕಪಿನಾ ದೈತ್ಯಪಕ್ಷೋಪಕಾರಿಣಾ ।
ಜಗನ್ನಿರಾಕೃತಂ ವೀರ ದಿಷ್ಟ್ಯಾ ಸ ಕ್ಷಯಮಾಗತಃ ॥ ೨೨ ॥

॥ ವ್ಯಾಸ ಉವಾಚ ॥

ಏವಂವಿಧಾನ್ಯನೇಕಾನಿ ಬಲದೇವಸ್ಯ ಧೀಮತಃ ।
ಕರ್ಮಾಣ್ಯಪರಿಮೇಯಾನಿ ಶೇಷಸ್ಯ ಧರಣೀಭೃತಃ ॥ ೨೩ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಬಲದೇವಮಾಹಾತ್ಮ್ಯೇ
ದ್ವಿವಿದವಾನರವಧವರ್ಣನಂ ನಾಮ ನವಾಧಿಕ-
ದ್ವಿಶತತಮೋಽಧ್ಯಾಯಃ



---

ದೈತ್ಯರಿಗೆ ಸಹಾಯಕನಾದ ಈ ಕಪಿಯಿಂದ ಪ್ರಪಂಚವು ಬಹುವಾಗಿ ತೊಂದರೆ ಗೀಡಾಗಿತ್ತು. ಭಲೆ, ಭಲೆ, ಆ ದೈತ್ಯನು ಇಂದು ನಿನ್ನಿಂದ ಹತನಾದನು. ನೀನು ಬಹು ಒಳ್ಳೆಯ ಕೆಲಸವನ್ನು ಮಾಡಿದೆ ಎಂದು ಸ್ತುತಿಸಿದರು-

೨೩. ಎಲೈ ಮುನಿಗಳಿರಾ! ಈರೀತಿಯಾಗಿ ಭೂಭಾರವನ್ನು ಹೊತ್ತಿರುವ ಆದಿಶೇಷನ ಅವತಾರವಾದ ಬಲರಾಮನ ಇನ್ನೂ ಇತರ ಕಾರ್ಯಗಳು ಲೆಕ್ಕಕ್ಕೇ ಸಿಗದೆ ಇರುವುವು ಎಂದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಬಲರಾಮನು ದ್ವಿವಿದನೆಂಬ ರಾಕ್ಷಸನನ್ನು ಸಂಹರಿಸಿದನೆಂಬ ಇನ್ನೂರೊಂಭತ್ತನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ದಶಾಧಿಕದ್ವಿಶತತಮೋऽಧ್ಯಾಯಃ

॥ ವ್ಯಾಸ ಉವಾಚ ॥

ಏವಂ ದೈತ್ಯವಧಂ ಕೃಷ್ಣೋ ಬಲದೇವಸಹಾಯವಾನ್ ।
ಚಕ್ರೇ ದುಷ್ಟಕ್ಷಿತೀಶಾನಾಂ ತಥೈವ ಜಗತಃ ಕೃತೇ ॥ ೧ ॥

ಕ್ಷಿತೇಶ್ಚ ಭಾರಂ ಭಗವಾನ್ಫಾಲ್ಗುನೇನ ಸಮಂ ವಿಭುಃ ।
ಅವತಾರಯಾಮಾಸ ಹರಿಃ ಸಮಸ್ತಾಕ್ಷೌಹಿಣೀವಧಾತ್ ॥ ೨ ॥

ಕೃತ್ವಾ ಭಾರಾವತರಣಂ ಭುವೋ ಹತ್ವಾಖಿಲಾನ್ನೃಪಾನ್ ।
ಶಾಪವ್ಯಾಜೇನ ವಿಪ್ರಾಣಾಮುಪಸಂಹೃತವಾನ್ಕುಲಂ ॥ ೩ ॥

---

### ಇನ್ನೂರಹತ್ತನೆಯ ಅಧ್ಯಾಯವು

೧. ಈರೀತಿಯಾಗಿ ಶ್ರೀಕೃಷ್ಣನು ಬಲದೇವನೊಡನೆ ಪ್ರಪಂಚಕ್ಷೇಮದ ಸಲುವಾಗಿ ದೈತ್ಯರನ್ನೂ ದುಷ್ಟರಾದ ದೊರೆಗಳನ್ನೂ ಸಂಹರಿಸಿದನು.

೨. ಮತ್ತು ಅರ್ಜುನನೊಂದಿಗೆ ಸಕಲವಾದ ಅಕ್ಷೋಹಿಣಿಸೇನೆಗಳನ್ನು ವಧಿಸಿದುದರಿಂದ ಭೂಭಾರವನ್ನು ಇಳಿಸಿದನು.

೩. ಈರೀತಿಯಾಗಿ ಎಲ್ಲ ದುಷ್ಟರಾಜರನ್ನೂ ಸಂಹರಿಸಿ ಭೂಭಾರವನ್ನು ಇಳಿಸಿದುದಲ್ಲದೆ ಬ್ರಾಹ್ಮಣರ ಶಾಪವೆಂಬ ನೆವದಿಂದ ತನ್ನ ವಂಶದವರನ್ನೂ ಕೊನೆಗಾಣಿಸಿದನು.

ಉತ್ಸೃಜ್ಯ ದ್ವಾರಕಾಂ ಕೃಷ್ಣಸ್ತ್ಯಕ್ತ್ವಾ ಮಾನುಷ್ಯಮಾತ್ಮಭೂಃ ।
ಸ್ವಾಂಶೋ ವಿಷ್ಣುಮಯಂ ಸ್ಥಾನಂ ಪ್ರವಿವೇಶ ಪುನರ್ನಿಜಂ ॥ ೪ ॥

॥ ಮುನಯ ಊಚುಃ ॥

ಸ ವಿಪ್ರಶಾಪವ್ಯಾಜೇನ ಸಂಜಹ್ರೇ ಸ್ವಕುಲಂ ಕಥಂ ।
ಕಥಂ ಚ ಮಾನುಷಂ ದೇಹಮುತ್ಸಸರ್ಜ ಜನಾರ್ದನಃ ॥ ೫ ॥

॥ ವ್ಯಾಸ ಉವಾಚ ॥

ವಿಶ್ವಾಮಿತ್ರಸ್ತಥಾ ಕಣ್ವೋ ನಾರದಶ್ಚ ಮಹಾಮುನಿಃ ।
ಪಿಂಡಾರಕೇ ಮಹಾತೀರ್ಥೇ ದೃಷ್ಟಾ ಯದುಕುಮಾರಕೈಃ ॥ ೬ ॥

ತತಸ್ತೇ ಯೌವನೋನ್ಮತ್ತಾ ಭಾವಿಕಾರ್ಯಪ್ರಚೋದಿತಾಃ ।
ಸಾಂಬಂ ಜಾಂಬವತೀಪುತ್ರಂ ಭೂಷಯಿತ್ವಾ ಸ್ತ್ರಿಯಂ ಯಥಾ ।
ಪ್ರಸೃತಾಸ್ತಾನ್ಮುನೀನೂಚುಃ ಪ್ರಣಿಪಾತಪುರಃಸರಂ ॥ ೭ ॥

---

೪. ಅನಂತರ ಕೃಷ್ಣರೂಪಿನ ಆ ಭಗವದಂಶವು ದ್ವಾರಕೆಯನ್ನು ಬಿಟ್ಟು ಕೊನೆಯಲ್ಲಿ ಮನುಷ್ಯಲೀಲೆಯನ್ನು ಸಾಕುಮಾಡಿ ಮರಳಿ ಸ್ವೀಯವಾದ ವಿಷ್ಣು ರೂಪವನ್ನೆ (ನಿಜರೂಪವನ್ನೇ) ಹೊಂಧಿತು ಎಂದನು. ಆಗ

೫. ಮುನಿಗಳು ವ್ಯಾಸನನ್ನು ಕುರಿತು ಓ ಮಹರ್ಷಿ! ಆ ಜನಾರ್ದನನು ಬ್ರಾಹ್ಮಣಶಾಪವೆಂಬ ವ್ಯಾಜದಿಂದ ತನ್ನ ಕುಲವನ್ನು ಸಂಹರಿಸಿದುದು ಹೇಗೆ? ಮತ್ತು ಆತನು ತನ್ನ ಮನುಷ್ಯರೂಪವನ್ನು ತೊರೆದುದಾವರೂ ಎಂತು? ಎಂದು ಪ್ರಶ್ನಿಸಲು

೬. ಪಿಂಡಾರಕವೆಂಬ ಪುಣ್ಯತಮವಾದ ತೀರ್ಥದಲ್ಲಿ ಯಾದವ ಕುಮಾರರು ವಿಶ್ವಾಮಿತ್ರ, ನಾರದ, ಕಣ್ವರೆಂಬ ಮೂವರು ಮಹಾಮುನಿಗಳನ್ನು ಕಂಡರು.

೭. ಆ ಯದುಗಳು ಯೌವನದಿಂದ ಮೆರೆಯುತ್ತಿದ್ದರು. ಅಲ್ಲದೆ ಮುಂದೆ ನಡೆಯಬೇಕಾದ ಕಾರ್ಯದ ಸಲುವಾಗಿ ಅವರು ಜಾಂಬುವತಿಯ ಮಗನಾದ ಸಾಂಬನಿಗೆ ಹೆಂಗಸಿನಂತೆ ಅಲಂಕರಿಸಿ ಆ ಮುನಿಗಳ ಬಳಿಗೆ ಹೋಗಿ ಅವರಿಗೆ ನಮಸ್ಕಾರಮಾಡಿ ಈರೀತಿ ಹೇಳಿದರು.

॥ ಕುಮಾರಾ ಊಚುಃ ॥

ಇಯಂ ಸ್ತ್ರೀ ಪುತ್ರಕಾಮಾ ತು ಪ್ರಭೋ ಕಿಂ ಜನಯಿಷ್ಯತಿ ॥ ೮ ॥

॥ ವ್ಯಾಸ ಉವಾಚ ॥

ದಿವ್ಯಜ್ಞಾನೋಪಪನ್ನಾಸ್ತೇ ವಿಪ್ರಲಬ್ಧಾ ಕುಮಾರಕೈಃ ।
ಶಾಪಂ ದದುಸ್ತದಾ ವಿಪ್ರಾಸ್ತೇಷಾಂ ನಾಶಾಯ ಸುವ್ರತಾಃ ॥ ೯ ॥

ಮುನಯಃ ಕುಪಿತಾಃ ಪ್ರೋಚುರ್ಮುಶಲಂ ಜನಯಿಷ್ಯತಿ ।
ಯೇನಾಖಿಲಕುಲೋತ್ಸಾದೋ ಯಾದವಾನಾಂ ಭವಿಷ್ಯತಿ ॥ ೧೦ ॥

ಇತ್ಯುಕ್ತಾಸ್ತೈಃ ಕುಮಾರಾಸ್ತ ಆಚಚಕ್ಷುರ್ಯಥಾತಥಂ ।
ಉಗ್ರಸೇನಾಯ ಮುಶಲಂ ಜಜ್ಞೇ ಸಾಂಬಸ್ಯ ಚೋದರಾತ್ ॥ ೧೧ ॥

---

೮. ಈ ನಾರಿಯು ಮಗನನ್ನು ಪಡೆಯಬೇಕೆಂದು ಆಶಿಸುತ್ತಿರುವಳು. ಇವಳು ಎಂತಹ ಮಗುವನ್ನು ಹೆರುವಳು? ಎಂದು ಕೇಳಿದರು.

೯. ಎಲೈ ಮುನಿಗಳಿರಾ! ದಿವ್ಯಜ್ಞಾನವುಳ್ಳವರೂ ವ್ರತಶೀಲರೂ ಆದ, ಮಹಾಮುನಿಗಳು ಈರೀತಿ ಯದುಕುಮಾರರಿಂದ ವಂಚಿಸಲ್ಪಟ್ಟುದನ್ನರಿತು ಅವರ ವಿನಾಶವುಂಟಾಗುವಂತೆ ಶಾಪವನ್ನಿತ್ತರು.

೧೦. ಮುನಿಗಳಿಗೆ ಕೋಪವುಂಟಾಗಿ ಈ ಕುಮಾರಿಯು ಮುಸಲವನ್ನು (ಒನಕೆಯನ್ನು) ಹೆರುವಳು. ಅದರಿಂದಲೇ ಯಾದವರ ಸಂತತಿಯೆಲ್ಲವೂ ನಿರ್ನಾಮವಾಗುವುದು ಎಂದರು.

೧೧. ಈ ಶಾಪವಾಕ್ಯವನ್ನು ಕೇಳಿ ಯದುಕುಮಾರರೆಲ್ಲರೂ ಉಗ್ರಸೇನನ ಬಳಿಗೆ ಬಂದು ನಡೆದ ಸಂಗತಿಯೆಲ್ಲವನ್ನೂ ಇದ್ದುದಿದ್ದಂತೆ ಅವನಿಗೆ ತಿಳಿಸಿದರು. ಮುನಿ ವಾಕ್ಯದಂತೆಯೇ ಸಾಂಬನ ಹೊಟ್ಟೆಯಲ್ಲಿ ಮುಸಲವು ಹುಟ್ಟಿತು.

ತದುಗ್ರಸೇನೋ ಮುಶಲಮಯಶ್ಚೂರ್ಣಮಕಾರಯತ್ ।
ಜಜ್ಞೇ ತಚ್ಚೈರಕಾ ಚೂರ್ಣಂ ಪ್ರಕ್ಷಿಪ್ತಂ ವೈ ಮಹೋದಧೌ ॥ ೧೨ ॥

ಮುಸಲಸ್ಯಾಥ ಲೌಹಸ್ಯ ಚೂರ್ಣಿತಸ್ಯಾನ್ಧಕೈರ್ದ್ವಿಜಾಃ ।
ಖಂಡಂ ಚೂರ್ಣಯಿತುಂ ಶೇಕುರ್ನೈವ ತೇ ತೋಮರಾಕೃತಿ ॥ ೧೩ ॥

ತದಪ್ಯಂಬುನಿಧೌ ಕ್ಷಿಪ್ತಂ ಮತ್ಸ್ಯೋ ಜಗ್ರಾಹ ಜಾಲಿಭಿಃ ।
ಘಾತಿತಸ್ಯೋದರಾತ್ತಸ್ಯ ಲುಬ್ಧೋ ಜಗ್ರಾಹ ತಜ್ಜರಾ ॥ ೧೪ ॥

ವಿಜ್ಞಾತಪರಮಾರ್ಥೋಽಪಿ ಭಗವಾನ್ಮಧುಸೂದನಃ ।
ನೈಚ್ಛತ್ತದನ್ಯಥಾ ಕರ್ತುಂ ವಿಧಿನಾ ಯತ್ಸಮಾಹೃತಂ ॥ ೧೫ ॥

ದೇವೈಶ್ಚ ಪ್ರಹಿತೋ ದೂತಃ ಪ್ರಣಿಪತ್ಯಾಹ ಕೇಶವಂ ।
ರಹಸ್ಯೇವಮಹಂ ದೂತಃ ಪ್ರಹಿತೋ ಭಗವನ್ಸುರೈಃ ॥ ೧೬ ॥

---

೧೨. ಆ ಮುಸಲವನ್ನು ಉಗ್ರಸೇನನು ಕಬ್ಬಿಣದ ಹುಡಿಯಂತೆ ಮಾಡಿಸಿ ಅದನ್ನು ಸಮುದ್ರಕ್ಕೆ ಎಸೆಯಿಸಿಬಿಟ್ಟನು. ಆ ಚೂರ್ಣವು ಕೆಲವು ಕಾಲದಲ್ಲಿ ಏರಣ (ಒಂದು ಬಗೆಯ ಜೊಂಡು) ರೂಪವಾಗಿ ಹುಟ್ಟಿಕೊಂಡಿತು.

೧೩. ಎಲೈ ದ್ವಿಜರೇ, ಅಂಧಕರು ಕಬ್ಬಿಣದ ಮುಸಲವನ್ನೇನೋ ಚೂರ್ಣಮಾಡಿದರು. ಆದರೆ ಮುಸಲದ ತೋಮರದಂತಿದ್ದ ತುಂಡೊಂದನ್ನು ಅವರು ನುಚ್ಚುನೂರುಮಾಡಲಾಗಲಿಲ್ಲ.

೧೪. ಆರೀತಿ ಉಳಿದಿದ್ದ ಆ ಒನಕೆಯ ತುಂಡನ್ನೂ ಸಮುದ್ರದಲ್ಲಿ ಎಸೆದುಬಿಟ್ಟರು. ಅದನ್ನು ಮೀನು ನುಂಗಿತು. ಆ ಮೀನನ್ನು ಬೆಸ್ತರು ಹಿಡಿದು ಅದರ ಹೊಟ್ಟೆಯನ್ನು ಕೊಯ್ಯುತ್ತಿದ್ದಾಗ ಆ ತುಂಡು ಅವರಿಗೆ ಸಿಕ್ಕಿತು. ಅವರಿಂದ ಆ ತುಂಡು ಜರಾ ಎಂಬ ಬೇಡನ ಕೈಗೆ ಸೇರಿತು.

೧೫. ಭಗವಂತನಾದ ಶ್ರೀ ಕೃಷ್ಣನು ಇದೆಲ್ಲವನ್ನೂ ಸರಿಯಾಗಿ ತಿಳಿದಿದ್ದರೂ ದೈವವು ತಂದೊಡ್ಡುವ ಮುಂದಿನ ಅನರ್ಥಗಳನ್ನು ಬದಲಾಯಿಸಲು ಇಷ್ಟ ಪಡಲಿಲ್ಲ.

೧೬–೧೭. ಆಸಮಯಕ್ಕೆ ಸರಿಯಾಗಿ ದೇವತೆಗಳು ಕೃಷ್ಣನಬಳಿಗೆ ತಮ್ಮ ದೂತನನ್ನು ಕಳುಹಿಸಿದರು. ಅವನು ಬಂದು ಕೃಷ್ಣನಿಗೆ ನಮಸ್ಕಾರ

ವಸ್ವಶ್ವಿಮರುದಾದಿತ್ಯರುದ್ರಸಾಧ್ಯಾದಿಭಿಃ ಸಹ ।
ವಿಜ್ಞಾಪಯತಿ ವಃ ಶಕ್ರಸ್ತದಿದಂ ಶ್ರೂಯತಾಂ ಪ್ರಭೋ ॥ ೧೭ ॥

॥ ದೇವಾ ಊಚುಃ ॥

ಭಾರಾವತರಣಾರ್ಥಾಯ ವರ್ಷಾಣಾಮಧಿಕಂ ಶತಂ ।
ಭಗವಾನವತೀರ್ಣೋಽತ್ರ ತ್ರಿದಶೈಃ ಸಂಪ್ರಸಾದಿತಃ ॥ ೧೮ ॥

ದುರ್ವೃತ್ತಾ ನಿಹತಾ ದೈತ್ಯಾ ಭುವೋ ಭಾರೋಽವತಾರಿತಃ ।
ತ್ವಯಾ ಸನಾಥಾಸ್ತ್ರಿದಶಾ ವ್ರಜಂತು ತ್ರಿದಿವೇಶತಾಂ ॥ ೧೯ ॥

ತದತೀತಂ ಜಗನ್ನಾಥ ವರ್ಷಾಣಾಮಧಿಕಂ ಶತಂ ।
ಇದಾನೀಂ ಗಮ್ಯತಾಂ ಸ್ವರ್ಗೋ ಭವತಾ ಯದಿ ರೋಚತೇ ॥ ೨೦ ॥

ದೇವೈರ್ವಿಜ್ಞಾಪಿತೋ ದೇವೋಽಪ್ಯಥಾತ್ರೈವ ರತಿಸ್ತವ ।
ತತ್ಸ್ಥೀಯತಾಂ ಯಥಾಕಾಲಮಾಖ್ಯೇಯಮನುಜೀವಿಭಿಃ ॥ ೨೧ ॥

---

ಮಾಡಿ ಏಕಾಂತದಲ್ಲಿ ಓ ಭಗವಂತನೇ, ವಸುಗಳು, ಅಶ್ವಿನಿದೇವತೆಗಳು, ಮರುತರು, ಆದಿತ್ಯರು, ರುದ್ರರು, ಸಾಧ್ಯರು ಮೊದಲಾದ ದೇವತೆಗಳೊಡನೆ ಕೂಡಿ ಇಂದ್ರನು ನಿಮಗೆ ವಿಜ್ಞಾಪನೆ ಮಾಡುವನು. ಹೇ ಪ್ರಭು, ಅದನ್ನು ಆಲಿಸು.

೧೮. ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ನೀನು ಭೂಭಾರವನ್ನಿಳಿಸುವ ಸಲುವಾಗಿ ನೂರು ವರ್ಷಗಳಿಗಿಂತಲೂ ಹೆಚ್ಚಾಗಿ ಇಲ್ಲಿ ಇದ್ದುದಾಯಿತು.

೧೯. ದುಷ್ಟರಾದ ದೈತ್ಯರೆಲ್ಲರೂ ಸಂಹರಿಸಲ್ಪಟ್ಟರು. ಭೂಮಿಯ ಭಾರವೂ ಇಳಿಸಲ್ಪಟ್ಟಿತು. ಆದುದರಿಂದ ಈಗ ದೇವತೆಗಳು ನಿನ್ನ ಸಂರಕ್ಷಣೆಗೊಳಪಟ್ಟು ಮೂರು ಲೋಕಗಳಿಗೂ ಒಡೆಯರಾಗಿ ಮೆರೆಯಲಿ.

೨೦. ಓ ಜಗನ್ನಾಥ! ನಿನ್ನಗಡುವಾದ ನೂರಕ್ಕಿಂತಲೂ ಹೆಚ್ಚಾದ ವರ್ಷಗಳು ಮುಗಿದುಹೋದುವು. ಈಗ ನಿನಗೆ ಅಪೇಕ್ಷೆಯಾದಲ್ಲಿ ಸ್ವರ್ಗಕ್ಕೆ ಹೊರಡಬಹುದಾಗಿದೆ.

೨೧. ದೇವತೆಗಳು ಈರೀತಿ ವಿಜ್ಞಾಪಿಸಿಕೊಂಡರೂ ಪ್ರಭುವಾದ ನಿನಗೆ ಇಲ್ಲೇ ಇರಬೇಕೆಂದು ತೋರಿದರೆ ಹಾಗೆಯೇ ಇಲ್ಲಿ ಇಷ್ಟಬಂದಷ್ಟು ಕಾಲ ಇರ

॥ ಶ್ರೀಭಗವಾನುವಾಚ ॥

ಯತ್ತ್ವಮಾತ್ಥಾಖಿಲಂ ದೂತ ವೇದ್ಮಿ ಚೈತದಹಂ ಪುನಃ ।
ಪ್ರಾರಬ್ಧ ಏವ ಹಿ ಮಯಾ ಯಾದವಾನಾಮಪಿ ಕ್ಷಯಃ ॥ ೨೨ ॥

ಭುವೋ ನಾಮಾತಿಭಾರೋಽಯಂ ಯಾದವೈರನಿಬರ್ಹಿತೈಃ ।
ಅವತಾರಂ ಕರೋಮ್ಯಸ್ಯ ಸಪ್ತರಾತ್ರೇಣ ಸತ್ವರಃ ॥ ೨೩ ॥

ಯಥಾಗೃಹೀತಂ ಚಾಂಭೋಧೌ ಹೃತ್ವಾಹಂ ದ್ವಾರಕಾಂ ಪುನಃ ।
ಯಾದವಾನುಪಸಂಹೃತ್ಯ ಯಾಸ್ಯಾಮಿ ತ್ರಿದಶಾಲಯಂ ॥ ೨೪ ॥

ಮನುಷ್ಯದೇಹಮುತ್ಸೃಜ್ಯ ಸಂಕರ್ಷಣಸಹಾಯವಾನ್ ।
ಪ್ರಾಪ್ತ ಏವಾಸ್ಮಿ ಮಂತವ್ಯೋ ದೇವೇಂದ್ರೇಣ ತಥಾ ಸುರೈಃ ॥ ೨೫ ॥

---

ಬಹುದು. ಕೈಕೆಳಗಿರುವವರು ಸಮಯವನ್ನರಿತು ತಿಳಿಸಬೇಕಾದುದು ಅವರ ಧರ್ಮವು ಎಂದು ಅವನು ತಿಳಿಸಿದನು.

೨೨. ಆಗ ಕೃಷ್ಣನು ಆ ಮಾತನ್ನು ಕೇಳಿ ನೀನು ಈಗ ಹೇಳಿದುದೆಲ್ಲವನ್ನೂ ನಾನು ಅರಿತಿರುವೆನು. ಯಾದವರ ವಿನಾಶಕಾರ್ಯವನ್ನೂ ಸಹ ಮೊದಲು ಮಾಡಿ ಇರುವೆನು.

೨೩. ಈ ಯಾದವರನ್ನು ಕೊನೆಗಾಣಿಸದಿದ್ದರೆ ಭೂಮಿಗೆ ಭಾರಿಯಾದ ಹೊರೆಯು ನಿಂತಂತಾಗುವುದು. ಆದುದರಿಂದ ಜಾಗ್ರತೆಯಾಗಿ ಏಳು ರಾತ್ರಿಗಳೊಳಗಾಗಿಯೇ ಈ ಹೊರೆಯನ್ನು ಇಳಿಸುವೆನು.

೨೪. ಹಿಂದೆ ಸಮುದ್ರದಲ್ಲಿ ದ್ವಾರಕೆಯನ್ನು ನಿರ್ಮಿಸಿದಂತೆಯೇ ಈಗ ಅದನ್ನು ಅಲ್ಲಿಯೇ ಮುಳುಗಿಸಿ, ಯಾದವರೆಲ್ಲರನ್ನೂ ನಿರ್ನಾಮಮಾಡಿ ದೇವಲೋಕಕ್ಕೆ ಬರುವವನಾಗಿದ್ದೇನೆ.

೨೫. ಈ ಮನುಷ್ಯದೇಹವನ್ನು ತೊರೆದು ಬಲರಾಮನೊಡನೆ ಅಲ್ಲಿಗೆ ಬಂದೆನೆಂಬುದಾಗಿಯೇ ದೇವತೆಗಳೂ ದೇವೇಂದ್ರನೂ ತಿಳಿದು ನೆಮ್ಮದಿಯಿಂದಿರಲಿ.

ಜರಾಸಂಧಾದಯೋ ಯೇऽನ್ಯೇ ನಿಹತಾ ಭಾರಹೇತವಃ ।
ಕ್ಷಿತೇಸ್ತೇಭ್ಯಃ ಸ ಭಾರೋ ಹಿ ಯದೂನಾಂ ಸಮಧೀಯತ ॥ ೨೬ ॥

ತದೇತತ್ಸುಮಹಾಭಾರಮವತಾರ್ಯ ಕ್ಷಿತೇರಹಂ ।
ಯಾಸ್ಯಾಮ್ಯಮರಲೋಕಸ್ಯ ಪಾಲನಾಯ ಬ್ರವೀಹಿ ತಾನ್ ॥ ೨೭ ॥

॥ ವ್ಯಾಸ ಉವಾಚ ॥

ಇತ್ಯುಕ್ತೋ ವಾಸುದೇವೇನ ದೇವದೂತಃ ಪ್ರಣಮ್ಯ ತಂ ।
ದ್ವಿಜಾಃ ಸ ದಿವ್ಯಯಾ ಗತ್ಯಾ ದೇವರಾಜಾಂತಿಕಂ ಯಯೌ ॥ ೨೮ ॥

ಭಗವಾನಪ್ಯಥೋತ್ಪಾತಾನ್ದಿವ್ಯಾನ್ಭೌಮಾಂತರಿಕ್ಷಗಾನ್ ।
ದದರ್ಶ ದ್ವಾರಕಾಪುರ್ಯಾಂ ವಿನಾಶಾಯ ದಿವಾನಿಶಂ ॥ ೨೯ ॥

ತಾನ್ದೃಷ್ಟ್ವಾ ಯಾದವಾನಾಹ ಪಶ್ಯಧ್ವಮತಿದಾರುಣಾನ್ ।
ಮಹೋತ್ಪಾತಾನ್ ಶಮಾಯೈಷಾಂ ಪ್ರಭಾಸಂ ಯಾಮ ಮಾ ಚಿರಂ ॥ ೩೦ ॥

---

೨೬. ಹಿಂದೆ ಭೂಮಿಗೆ ಭಾರಭೂತರಾಗಿದ್ದ ಜರಾಸಂಧ ಮೊದಲಾದ ದುಷ್ಟರಾಜರನ್ನು ಸಂಹರಿಸಲಿಲ್ಲವೇ. ಅವರಿಗಿಂತಲೂ ಈ ಯದುಗಳಿಂದಲೇ ಭೂಮಿಗೆ ಹೆಚ್ಚಾದ ಹೊರೆಯಾಗಿರುವುದೆಂದು ನಾನು ತಿಳಿದಿರುವೆನು.

೨೭. ಆದುದರಿಂದ ಈಗ ಭೂಮಿಗೆ ಒದಗಿರುವ ಭಾರಿ ಹೊರೆಯನ್ನು ಮೊದಲು ಇಳಿಸಿ ಅನಂತರ ದೇವಲೋಕವನ್ನು ಪಾಲಿಸಲು ಬರುವೆನು ಎಂದು ತಿಳಿಸು ಎಂದನು.

೨೮. ಈರೀತಿಯಾಗಿ ಶ್ರೀಕೃಷ್ಣನು ಹೇಳಲು ದೇವದೂತನು ಅವನಿಗೆ ನಮಸ್ಕರಿಸಿ ಅಂತರಿಕ್ಷಗಮನದಿಂದ ದೇವರಾಜನಾದ ಇಂದ್ರನ ಬಳಿಗೆ ಹೋದನು.

೨೯. ಅನಂತರ ಭಗವಂತನಾದ ಶ್ರೀಕೃಷ್ಣನು ದ್ವಾರಕೆಯಲ್ಲಿ ಮುಂದೊದಗುವ ವಿನಾಶವನ್ನು ಸೂಚಿಸುವಂತಹ ಭಯಂಕರವಾದ ಉತ್ಪಾತಗಳು ಭೂಮಿಯಲ್ಲೂ ಆಕಾಶದಲ್ಲೂ ಆಗುತ್ತಿರುವುದನ್ನು

೩೦. ಕಂಡು ಯಾದವರನ್ನೆಲ್ಲಾ ಕರೆದು ಈ ಭಯಂಕರವಾದ ಮಹೋತ್ಪಾತಗಳನ್ನು ನೋಡಿರಿ, ಇದರಿಂದಾಗುವ ಅನಿಷ್ಟನಿವಾರಣೆಗಾಗಿ ತಡಮಾಡದೆ ಪಭ್ರಾಸತೀರ್ಥಕ್ಕೆ ಹೊರಡೋಣ ಎಂದನು.

॥ ವ್ಯಾಸ ಉವಾಚ ॥

ಮಹಾಭಾಗವತಃ ಪ್ರಾಹ ಪ್ರಣಿಪತ್ಯೋದ್ಧವೋ ಹರಿಂ　　　　॥ ೩೧ ॥

॥ ಉದ್ಧವ ಉವಾಚ ॥

ಭಗವನ್ಯನ್ಮಯಾ ಕಾರ್ಯಂ ತದಾಜ್ಞಾಪಯ ಸಾಂಪ್ರತಂ ।
ಮನ್ಯೇ ಕುಲಮಿದಂ ಸರ್ವಂ ಭಗವಾನ್ಸಂಹರಿಷ್ಯತಿ ।
ನಾಶಾಯಾಸ್ಯ ನಿಮಿತ್ತಾನಿ ಕುಲಸ್ಯಾಚ್ಯುತ ಲಕ್ಷಯೇ　　　　॥ ೩೨ ॥

॥ ಶ್ರೀಭಗವಾನುವಾಚ ॥

ಗಚ್ಛ ತ್ವಂ ದಿವ್ಯಯಾ ಗತ್ಯಾ ಮತ್ಪ್ರಸಾದಸಮುತ್ಥಯಾ ।
ಬದರೀಮಾಶ್ರಮಂ ಪುಣ್ಯಂ ಗಂಧಮಾದನಪರ್ವತೇ　　　　॥ ೩೩ ॥

ನರನಾರಾಯಣಸ್ಥಾನೇ ಪವಿತ್ರಿತಮಹೀತಲೇ ।
ಮನ್ಮನಾ ಮತ್ಪ್ರಸಾದೇನ ತತ್ರ ಸಿದ್ಧಿಮವಾಪ್ಸ್ಯಸಿ　　　　॥ ೩೪ ॥

---

೩೧-೩೨. ಎಲೈ ಮುನಿಗಳಿರಾ ! ಆಗ ಪರಮ ಭಾಗವತೋತ್ತಮನಾದ ಉದ್ಧವನು ಶ್ರೀಕೃಷ್ಣನಿಗೆ ನಮಸ್ಕರಿಸಿ ಎಲೈ ಭಗವಂತನೇ, ನಾನೀಗ ಏನು ಮಾಡಬೇಕೆಂಬುದನ್ನು ಆಜ್ಞಾಪಿಸು. ಈ ಯಾದವ ಕುಲವನ್ನು ಸ್ವಾಮಿಯು ಸಂಹರಿಸಲು ತೊಡಗಿರುವಂತೆ ತೋರುತ್ತದೆ. ಓ ಅಚ್ಯುತ ! ಈ ಯದುವಂಶದ ವಿನಾಶವನ್ನು ಸೂಚಿಸುವಂತಹ ದುರ್ನಿಮಿತ್ತಗಳನ್ನೀಗ ಕಾಣುತ್ತಿರುವೆನು ಎಂದನು.

೩೩. ಆಗ ಭಗವಂತನಾದ ಶ್ರೀಹರಿಯು ಉದ್ಧವನನ್ನು ಕುರಿತು ನನ್ನ ಅನುಗ್ರಹದಿಂದ ನೀನು ಅಂತರಿಕ್ಷಮಾರ್ಗದಿಂದ ಗಂಧಮಾಧನ ಪರ್ವತದಲ್ಲಿರುವ ಪುಣ್ಯತಮವಾದ ಬದರಿಕಾಶ್ರಮಕ್ಕೆ ಹೋಗು.

೩೪. ಆ ಪ್ರದೇಶವು ಬಹುಪವಿತ್ರವಾದುದು. ನರನಾರಾಯಣ ಮಹರ್ಷಿಗಳ ನಿವಾಸವು. ಅಲ್ಲಿ ನೀನು ನನ್ನಲ್ಲಿಯೇ ಮನಸ್ಸನ್ನು ನೆಲೆಗೊಳಿಸಿ ಕೊನೆಗೆ ನನ್ನ ಅನುಗ್ರಹದಿಂದ ಸಿದ್ಧಿಯನ್ನು ಪಡೆಯುವೆ.

ಅಹಂ ಸ್ವರ್ಗಂ ಗಮಿಷ್ಯಾಮಿ ಉಪಸಂಹೃತ್ಯ ವೈ ಕುಲಂ ।
ದ್ವಾರಕಾಂ ಚ ಮಯಾ ತ್ಯಕ್ತಾಂ ಸಮುದ್ರಃ ಪ್ಲಾವಯಿಷ್ಯತಿ ॥ ೩೫ ॥

॥ ವ್ಯಾಸ ಉವಾಚ ॥

ಇತ್ಯುಕ್ತಃ ಪ್ರಣಿಪತ್ಯೈನಂ ಜಗಾಮ ಸ ತದೋದ್ಧವಃ ।
ನರನಾರಾಯಣಸ್ಥಾನಂ ಕೇಶವೇನಾನುಮೋದಿತಃ ॥ ೩೬ ॥

ತತಸ್ತೇ ಯಾದವಾಃ ಸರ್ವೇ ರಥಾನಾರುಹ್ಯ ಶೀಘ್ರಗಾನ್ ।
ಪ್ರಭಾಸಂ ಪ್ರಯಯುಃ ಸಾರ್ಧಂ ಕೃಷ್ಣರಾಮಾದಿಭಿರ್ದ್ವಿಜಾಃ ॥ ೩೭ ॥

ಪ್ರಾಪ್ಯ ಪ್ರಭಾಸಂ ಪ್ರಯತಾ ಪ್ರೀತಾಸ್ತೇ ಕುಕ್ಕುರಾಂಧಕಾಃ ।
ಚಕ್ರುಸ್ತತ್ರ ಸುರಾಪಾನಂ ವಾಸುದೇವಾನುಮೋದಿತಾಃ ॥ ೩೮ ॥

ಪಿಬತಾಂ ತತ್ರ ವೈ ತೇಷಾಂ ಸಂಘರ್ಷೇಣ ಪರಸ್ಪರಂ ।
ಯಾದವಾನಾಂ ತತೋ ಜಜ್ಞೇ ಕಲಹಾಗ್ನಿಃ ಕ್ಷಯಾವಹಃ ॥ ೩೯ ॥

---

೩೫. ನಾನು ಈ ಯದುವಂಶವನ್ನು ಮುಕ್ತಾಯಗೊಳಿಸಿ ಸ್ವರ್ಗಕ್ಕೆ ತೆರಳುವೆನು. ನಾನು ಪರಿತ್ಯಜಿಸಿದ ನಂತರ ದ್ವಾರಕೆಯನ್ನು ಸಮುದ್ರವು ಕೊಚ್ಚಿಹಾಕಿಬಿಡುವುದು. (ಮುಳುಗಿಸಿಬಿಡುವುದು) ಎಂದನು.

೩೬. ಎಲೈ ಋಷಿಗಳಿರಾ! ಈರೀತಿ ಕೃಷ್ಣನಿಂದ ಆಜ್ಞಾಪಿಸಲ್ಪಟ್ಟ ಉದ್ಧವನು ಅವನಿಗೆ ನಮಸ್ಕಾರಮಾಡಿ ನರನಾರಾಯಣರ ನಿವಾಸಸ್ಥಾನವಾದ ಬದರಿಕಾಶ್ರಮಕ್ಕೆ ಆಗಲೇ ತೆರಳಿದನು.

೩೭. ಅನಂತರ ಯಾದವರೆಲ್ಲರೂ ವೇಗವಾಗಿ ಹೋಗತಕ್ಕ ರಥಗಳನ್ನೇರಿ ಕೃಷ್ಣಬಲರಾಮಾದಿಗಳೊಡನೆ ಪ್ರಭಾಸ ತೀರ್ಥಕ್ಕೆ ಹೊರಟರು.

೩೮. ಆ ಕುಕ್ಕುರ ಅಂಧಕ ಮೊದಲಾದವರು ಪ್ರಭಾಸತೀರ್ಥವನ್ನು ಸೇರಿ ಪರಿಶುದ್ಧತೆಯನ್ನು ಹೊಂದಿ ಕೃಷ್ಣನ ಅನುಮತಿಯಂತೆ ಸುರೆಯನ್ನು ಪಾನ ಮಾಡಿದರು.

೩೯. ಅನಂತರ ಆ ಯಾದವರು ಸುರೆಯನ್ನು ಪಾನಮಾಡಲು ನಾನು ತಾನೆಂದು ಕುಡಿಯಹೋದಾಗ ನುಗ್ಗಾಟವಾಗಿ ಅವರ ವಿನಾಶಕ್ಕೆ ಕಾರಣವಾದ ಕಲಹಾಗ್ನಿಯು ಹೊತ್ತುಕೊಂಡಿತು.

ಜಘ್ನುಃ ಪರಸ್ಪರಂ ತೇ ತು ಶಸ್ತ್ರೈರ್ದೈವಬಲಾತ್ಕೃತಾಃ ।
ಕ್ಷೀಣಶಸ್ತ್ರಾಸ್ತು ಜಗೃಹುಃ ಪ್ರತ್ಯಾಸನ್ನಾಮಥೈರಕಾಂ ॥ ೪೦ ॥

ಏರಕಾ ತು ಗೃಹೀತಾ ತೈರ್ವಜ್ರಭೂತೇವ ಲಕ್ಷ್ಯತೇ ।
ತಯಾ ಪರಸ್ಪರಂ ಜಘ್ನುಃ ಸಂಪ್ರಹಾರೈಃ ಸುದಾರುಣೈಃ ॥ ೪೧ ॥

ಪ್ರದ್ಯುಮ್ನ ಸಾಂಬಪ್ರಮುಖಾಃ ಕೃತವರ್ಮಾಥ ಸಾತ್ಯಕಿಃ ।
ಅನಿರುದ್ಧಾದಯಶ್ಚಾನ್ಯೇ ಪೃಥುರ್ವಿಪೃಥುರೇವ ಚ ॥ ೪೨ ॥

ಚಾರುವರ್ಮಾ ಸುಚಾರುಶ್ಚ ತಥಾಕ್ರೂರಾದಯೋ ದ್ವಿಜಾಃ ।
ಏರಕಾರೂಪಿಭಿರ್ವಜ್ರೈಸ್ತೇ ನಿಜಘ್ನುಃ ಪರಸ್ಪರಂ ॥ ೪೩ ॥

ನಿವಾರಯಾಮಾಸ ಹರಿರ್ಯಾದವಾಸ್ತೇ ಚ ಕೇಶವಂ ।
ಸಹಾಯಂ ಮೇನಿರೇ ಪ್ರಾಪ್ತಂ ತೇ ನಿಜಘ್ನುಃ ಪರಸ್ಪರಂ ॥ ೪೪ ॥

---

೪೦. ಆಗ ಅವರು ಒಬ್ಬರಿಗೊಬ್ಬರು ಆಯುಧಗಳನ್ನು ತೆಗೆದುಕೊಂಡು ದೈವಪ್ರೇರಣೆಯಿಂದ ಹೊಡೆದಾಡಿದರು. ಆ ಹೊಡೆದಾಟದಲ್ಲಿ ಅವರ ಆಯುಧಗಳೆಲ್ಲವೂ ಹಾಳಾಗಲು ಹೊಡೆದಾಡಲು ಸಮೀಪದಲ್ಲೇ ಇದ್ದ ಏರಕಾ (ಜೊಂಡು) ಹುಲ್ಲನ್ನು ಕಿತ್ತುಕೊಂಡರು.

೪೧. ಆ ಏರಕೆಯು ಯಾದವರ ಕೈಗೆ ಬಂದೊಡನೆಯೇ ಅದು ವಜ್ರಾಯುಧದ ಬಲವನ್ನು ಹೊಂದಿತು. ಅ ಏರಕೆಯಿಂದಲೇ ಯಾದವರು ಅತಿ ಭಯಂಕರವಾಗಿ ಒಬ್ಬರಿಗೊಬ್ಬರು ಹೋರಾಡಿದರು.

೪೨-೪೩. ಎಲೈ ದ್ವಿಜರೇ, ಪ್ರದ್ಯುಮ್ನ, ಸಾಂಬ, ಕೃತವರ್ಮ, ಸಾತ್ಯಕಿ ಅನಿರುದ್ಧ, ಪೃಥು, ವಿಪೃಥು, ಚಾರುವರ್ಮ, ಸುಚಾರು, ಅಕ್ರೂರ ಮೊದಲಾದ ಯಾದವರೆಲ್ಲರೂ ಏರಕಾ ಎಂಬ ಹುಲ್ಲಿನ ರೂಪದಲ್ಲಿದ್ದ ವಜ್ರಾಯುಧದಿಂದ ಪರಸ್ಪರ ಕಾದಾಡಿದರು.

೪೪. ಆಗ ಶ್ರೀಕೃಷ್ಣನು ಅವರೆಲ್ಲರನ್ನೂ ಬೇಡವೆಂದು ತಡೆದನು. ಆದರೆ ಯಾದವರು ಶ್ರೀಕೃಷ್ಣನು ತಮ್ಮ ಸಹಾಯಕ್ಕಾಗಿ ಬಂದಿರುವನೆಂದು ಭಾವಿಸಿ ಒಬ್ಬರಿಗೊಬ್ಬರು ಹೊಡೆದಾಡಿದರು.

ಕೃಷ್ಣೋऽಪಿ ಕುಪಿತಸ್ತೇಷಾಮೇರಕಾಮುಷ್ಟಿಮಾದದೇ ।
ವಧಾಯ ತೇಷಾಂ ಮುಶಲಂ ಮುಷ್ಟಿಲೋಹಮಭೂತ್ತದಾ ॥ ೪೫ ॥

ಜಘಾನ ತೇನ ನಿಃಶೇಷಾನಾತತಾಯಿನ ಸ ಯಾದವಾನ್ ।
ಜಘ್ನುಶ್ಚ ಸಹಸಾಭ್ಯೇತ್ಯ ತಥಾನ್ಯೇ ತು ಪರಸ್ಪರಂ ॥ ೪೬ ॥

ತತಶ್ಚಾರ್ಣವಮಧ್ಯೇನ ಜೈತ್ರೋऽಸೌ ಚಕ್ರಿಣೋ ರಥಃ ।
ಪಶ್ಯತೋ ದಾರುಕಸ್ಯಾಶು ಹೃತೋऽಶ್ವೈರ್ದ್ವಿಜಸತ್ತಮಾಃ ॥ ೪೭ ॥

ಚಕ್ರಂ ಗದಾ ತಥಾ ಶಾರ್ಙ್ಗಂ ತೂಣೌ ಶಂಖೋऽಸಿರೇವ ಚ ।
ಪ್ರದಕ್ಷಿಣಂ ತತಃ ಕೃತ್ವಾ ಜಗ್ಮುರಾದಿತ್ಯವರ್ತ್ಮನಾ ॥ ೪೮ ॥

ಕ್ಷಣಮಾತ್ರೇಣ ವೈ ತತ್ರ ಯಾದವಾನಾಮಭೂತ್ಕ್ಷಯಃ ।
ಋತೇ ಕೃಷ್ಣಂ ಮಹಾಬಾಹುಂ ದಾರುಕಂ ಚ ದ್ವಿಜೋತ್ತಮಾಃ ॥ ೪೯ ॥

---

೪೫-೪೬. ಆಗ ಕೃಷ್ಣನಿಗೂ ಕೋಪವು ಕೆರಳಿ ತಾನೂ ಒಂದುಹಿಡಿ ಏರಕೆ (ಹೊಡಕೆ) ಯನ್ನು ತೆಗೆದುಕೊಂಡನು. ಹಿಡಿಯಷ್ಟು ಏರಕೆಯು ಯಾದವರ ವಧದ ಸಲುವಾಗಿ ಒಳ್ಳೆಯ ಒನಕೆಯಂತೆ ಆಯಿತು. ಅದರಿಂದಲೇ ಕೃಷ್ಣನು ಯಾದವರನ್ನೆಲ್ಲಾ ಕೊಲ್ಲಬೇಕೆಂದುದ್ದೇಶಿಸಿ, ಅವರೆಲ್ಲರನ್ನೂ ಬಡಿದನು. ಆಗ ಅಳಿದುಳಿದಿದ್ದ ಯಾದವರೂ ಸಹ ಧಾವಿಸಿ ಬಂದು ಒಬ್ಬರಿಗೊಬ್ಬರು ಹೋರಾಡಿದರು.

೪೭. ಅನಂತರ ಶ್ರೀಕೃಷ್ಣನು ದಿಗ್ವಿಜಯಪ್ರಯಾಣಗಳಲ್ಲಿ ಬಳಸುತ್ತಿದಂತಹ ಜೈತ್ರರಥವನ್ನು, ಸಾರಥಿಯಾದ ದಾರುಕನು ನೋಡುತ್ತಿರುವಂತೆಯೇ ಅದಕ್ಕೆ ಕಟ್ಟಿದ್ದ ಕುದುರೆಗಳು ಸಮುದ್ರದ ಮಧ್ಯಭಾಗಕ್ಕೆ ಎಳೆದುಕೊಂಡು ಹೋಗಿಬಿಟ್ಟುವು.

೪೮. ಅದೇರೀತಿ ಚಕ್ರವೂ, ಗದೆಯೂ, ಶಾರ್ಙ್ಗವೆಂಬ ಧನುಸ್ಸೂ, ಎರಡು ಬತ್ತಳಿಕೆಗಳೂ, ಶಂಖವೂ, ಕತ್ತಿಯೂ, ಶ್ರೀಕೃಷ್ಣನಿಗೆ ಪ್ರದಕ್ಷಿಣೆಮಾಡಿ ಸೂರ್ಯಮಾರ್ಗದಲ್ಲಿ ಹೊರಟು ಹೋದುವು.

೪೯. ಎಲೈ ಬ್ರಾಹ್ಮಣೋತ್ತಮರಿರಾ ! ಈರೀತಿಯಾಗಿ ಶ್ರೀಕೃಷ್ಣನನ್ನೂ ದಾರುಕನೊಬ್ಬನನ್ನೂ ಬಿಟ್ಟು ಉಳಿದ ಯಾದವರೆಲ್ಲರೂ ಕ್ಷಣಮಾತ್ರದಲ್ಲಿ ನಿರ್ನಾಮವಾದರು.

ಚಂಕ್ರಮ್ಯಮಾಣೌ ತೌ ರಾಮಂ ವೃಕ್ಷಮೂಲಕೃತಾಸನಂ ।
ದದೃಶಾತೇ ಮುಖಾಚ್ಚಾಸ್ಯ ನಿಷ್ಕ್ರಾಮಂತಂ ಮಹೋರಗಂ ॥ ೫೦ ॥

ನಿಷ್ಕ್ರಮ್ಯ ಸ ಮುಖಾತ್ತಸ್ಯ ಮಹಾಭೋಗೋ ಭುಜಂಗಮಃ ।
ಪ್ರಯಾತಶ್ಚಾರ್ಣವಂ ಸಿದ್ಧೈಃ ಪೂಜ್ಯಮಾನಸ್ತಥೋರಗೈಃ ॥ ೫೧ ॥

ತಮರ್ಘ್ಯಮಾದಾಯ ತದಾ ಜಲಧಿಃ ಸಂಮುಖಂ ಯಯೌ ।
ಪ್ರವಿವೇಶ ಚ ತತ್ತೋಯಂ ಪೂಜಿತಃ ಪನ್ನಗೋತ್ತಮೈಃ ।
ದೃಷ್ಟ್ವಾ ಬಲಸ್ಯ ನಿರ್ಯಾಣಂ ದಾರುಕಂ ಪ್ರಾಹ ಕೇಶವಃ ॥ ೫೨ ॥

॥ ಶ್ರೀಭಗವಾನುವಾಚ ॥

ಇದಂ ಸರ್ವಂ ತ್ವಮಾಚಕ್ಷ್ವ ವಸುದೇವೋಗ್ರಸೇನಯೋಃ ।
ನಿರ್ಯಾಣಂ ಬಲದೇವಸ್ಯ ಯಾದವಾನಾಂ ತಥಾ ಕ್ಷಯಂ ॥ ೫೩ ॥

ಯೋಗೇ ಸ್ಥಿತ್ವಾಹಮಪ್ಯೇತತ್ಪರಿತ್ಯಜ್ಯ ಕಲೇವರಂ ।
ವಾಚ್ಯಶ್ಚ ದ್ವಾರಕಾವಾಸೀ ಜನಃ ಸರ್ವಸ್ತಥಾಹುಕಃ ॥ ೫೪ ॥

---

೫೦. ಅನಂತರ ಅವರಿಬ್ಬರೂ ಹಾಗೆಹೋ ಅಲ್ಲಿ ಬರುತ್ತಿರುವಾಗ ವೃಕ್ಷವೊಂದರ ಬುಡದಲ್ಲಿ ಬಲರಾಮನು ಕುಳಿತಿದ್ದುದನ್ನೂ ಅವನ ಬಾಯಿಂದ ಭಾರಿಯಾದ ಸರ್ಪವೊಂದು ಹೊರಬರುತ್ತಿರುವುದನ್ನೂ ನೋಡಿದರು.

೫೧. ಹಾಗೆ ಬಲರಾಮನ ಮುಖದಿಂದ ಹೊರಬಿದ್ದ ಭಾರಿಪ್ರಮಾಣದ ದೇಹವುಳ್ಳ ಆ ಸರ್ಪವು ಸಿದ್ಧರಿಂದಲೂ, ಪನ್ನಗರಿಂದಲೂ ಸೇವಿಸಲ್ಪಡುತ್ತಾ ಸಮುದ್ರವನ್ನು ಕುರಿತು ಹೊರಟಿತು.

೫೨. ಆಗ ಸಾಗರನು ಅರ್ಘ್ಯವನ್ನು ತೆಗೆದುಕೊಂಡು ಅದಕ್ಕೆ ಎದುರಾಗಿ ಬಂದನು. ಬಳಿಕ ಪನ್ನಗರೆಲ್ಲರೂ ತನ್ನನ್ನು ಪೂಜಿಸಲು ಆ ಮಹಾಸರ್ಪವು ಸಾಗರದ ನೀರಿನೊಳಕ್ಕೆ ಪ್ರವೇಶಿಸಿಬಿಟ್ಟಿತು. ಹಾಗೆ ಬಲರಾಮನು ನಿರ್ಯಾಣಹೊಂದಿದುದನ್ನು ಕಂಡು ಶ್ರೀಕೃಷ್ಣನು ದಾರುಕನನ್ನು ಕುರಿತು,

೫೩. ದಾರುಕಾ! ನೀನು ವಸುದೇವ ಮತ್ತು ಉಗ್ರಸೇನನಬಳಿಗೆ ಹೋಗಿ ಯಾದವರೆಲ್ಲರೂ ಹೊಡೆದಾಡಿ ಸತ್ತುದನ್ನೂ, ಬಲದೇವನು ನಿರ್ಯಾಣ ಹೊಂದಿದುದನ್ನೂ ತಿಳಿಸು.

೫೪–೫೫. ನಾನೂ ಕೂಡ ಯೋಗಮಾರ್ಗವನ್ನು ಹಿಡಿದು ಈ ದೇಹವನ್ನು ತ್ಯಜಿಸಿ ನಿರ್ಯಾಣಮಾಡುವೆನು. ದ್ವಾರಕೆಯ ನಿವಾಸಿಗಳಾದ ಎಲ್ಲ

ಯಥೇಮಾಂ ನಗರೀಂ ಸರ್ವಾಂ ಸಮುದ್ರಃ ಪ್ಲಾವಯಿಷ್ಯತಿ ।
ತಸ್ಮಾದ್ರಥೈಃ ಸುಸಜ್ಜೈಸ್ತು ಪ್ರತೀಕ್ಷ್ಯೋ ಹ್ಯರ್ಜುನಾಗಮಃ ॥ ೫೫ ॥

ನ ಸ್ಥೇಯಂ ದ್ವಾರಕಾಮಧ್ಯೇ ನಿಷ್ಕ್ರಾಂತೇ ತತ್ರ ಪಾಂಡವೇ ।
ತೇನೈವ ಸಹ ಗಂತವ್ಯಂ ಯತ್ರ ಯಾತಿ ಸ ಕೌರವಃ ॥ ೫೬ ॥

ಗತ್ವಾ ಚ ಬ್ರೂಹಿ ಕೌಂತೇಯಮರ್ಜುನಂ ವಚನಂ ಮಮ ।
ಪಾಲನೀಯಸ್ತ್ವಯಾ ಶಕ್ತ್ಯಾ ಜನೋಽಯಂ ಮತ್ಪರಿಗ್ರಹಃ ॥ ೫೭ ॥

ಇತ್ಯರ್ಜುನೇನ ಸಹಿತೋ ದ್ವಾರವತ್ಯಾಂ ಭವಾನ್ ಜನಂ ।
ಗೃಹೀತ್ವಾ ಯಾತು ವಜ್ರಶ್ಚ ಯದುರಾಜೋ ಭವಿಷ್ಯತಿ ॥ ೫೮ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶ್ರೀಕೃಷ್ಣಚರಿತೇ ಶ್ರೀಕೃಷ್ಣ-
ನಿಜಧಾಮಗಮನನಿರೂಪಣಂ ನಾಮ ದಶಾಧಿಕ-
ದ್ವಿಶತತಮೋಽಧ್ಯಾಯಃ

---

ಜನರಿಗೂ ಮತ್ತು ಆಹುಕನಿಗೂ ನಾನು ಹೇಳಿದ ಮಾತೆಂದು ಹೇಳಿ, ಸಮುದ್ರವು ದ್ವಾರಕನಗರಿಯೆಲ್ಲವನ್ನೂ ಕೊಚ್ಚಿಕೊಂಡುಹೋಗುವುದೆಂದೂ ಆದುದರಿಂದ ಎಲ್ಲರೂ ತಮ್ಮತಮ್ಮ ರಥಗಳನ್ನು ಸಿದ್ಧಪಡಿಸಿಕೊಂಡು ಅರ್ಜುನನು ಬರುತ್ತಿರುವುದನ್ನೇ ಕಾಯುತ್ತಿರಬೇಕೆಂಬುದನ್ನೂ ತಿಳಿಸು.

೫೬. ಅರ್ಜುನನು ದ್ವಾರಕಿಯನ್ನು ಬಿಟ್ಟು ಹೊರಡುತ್ತಲೇ ಯಾವನೂ ಕೂಡ ದ್ವಾರಕೆಯಲ್ಲಿ ಇರಕೂಡದು. ಎಲ್ಲರೂ ಆ ಕುರುಪುತ್ರನಾದ ಅರ್ಜುನನೊಡನೆ ಅವನು ಹೋದಲ್ಲಿಗೆ ಹೋಗಬೇಕು.

೫೭. ಆದುದರಿಂದ ನೀನೀಗ ಹೋಗಿ ಕುಂತೀಪುತ್ರನಾದ ಅರ್ಜುನನನ್ನು ಕಂಡು ನನ್ನನ್ನೇ ಆಶ್ರಯಿಸಿಕೊಂಡಿದ್ದ ಈ ಜನರೆಲ್ಲರನ್ನೂ ನೀನು ನಿನ್ನ ಶಕ್ತಿಯಿಂದ ಕಾಪಾಡು ಎಂದು ನಾನು ಹೇಳಿದೆನೆಂಬುದಾಗಿ ತಿಳಿಸು.

೫೮. ಮತ್ತು ಅರ್ಜುನನೊಡನೆ ನೀನು ದ್ವಾರಾವತಿಗೆ ಬಂದು ಅಲ್ಲಿರುವ ಜನರನ್ನೆಲ್ಲಾ ಕರೆದುಕೊಂಡು ಹೋಗು. ವಜ್ರನು ಅಳಿಮಳಿದ ಯದುಗಳಿಗೆ ಅರಸನಾಗುವನು ಎಂದು ಹೇಳಿದನು.

ಇಲ್ಲಿಗೆ ಶ್ರೀ ಬ್ರಹ್ಮಪುರಾಣದಲ್ಲಿ ಶ್ರೀಕೃಷ್ಣನಿಜಧಾಮಗಮನನಿರೂಪಣವೆಂಬ
ಇನ್ನೂರಹತ್ತನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

# ಏಕದಶಾಧಿಕದ್ವಿಶತತಮೋಽಧ್ಯಾಯಃ

॥ ವ್ಯಾಸ ಉವಾಚ ॥

ಇತ್ಯುಕ್ತೋ ದಾರುಕಃ ಕೃಷ್ಣಂ ಪ್ರಣಿಪತ್ಯ ಪುನಃ ಪುನಃ ।
ಪ್ರದಕ್ಷಿಣಂ ಚ ಬಹುಶಃ ಕೃತ್ವಾ ಪ್ರಾಯಾದ್ಯಥೋದಿತಂ ॥ ೧ ॥

ಸ ಚ ಗತ್ವಾ ತಥಾ ಚಕ್ರೇ ದ್ವಾರಕಾಯಾಂ ತಥಾರ್ಜುನಂ ।
ಆನಿನಾಯ ಮಹಾಬುದ್ಧಿಂ ವಜ್ರಂ ಚಕ್ರೇ ತಥಾ ನೃಪಂ ॥ ೨ ॥

ಭಗವಾನಪಿ ಗೋವಿಂದೋ ವಾಸುದೇವಾತ್ಮಕಂ ಪರಂ ।
ಬ್ರಹ್ಮಾತ್ಮನಿ ಸಮಾರೋಪ್ಯ ಸರ್ವಭೂತೇಷ್ವಧಾರಯತ್ ॥ ೩ ॥

---

## ಇನ್ನೂರಹನ್ನೊಂದನೆಯ ಅಧ್ಯಾಯವು

೧. ಎಲೈ ಮುನಿಗಳಿರಾ! ಈರೀತಿ ಕೃಷ್ಣನು ಹೇಳಿದುದನ್ನು ಕೇಳಿ ಆ ದಾರುಕನು ಮತ್ತೆಮತ್ತೆ ಆ ಕೃಷ್ಣನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಅವನ ಹೇಳಿಕೆಯಂತೆಯೇ ಹೊರಟುಹೋದನು.

೨. ದಾರುಕನು ಹೋಗಿ ಅರ್ಜುನನ್ನು ದ್ವಾರಾವತಿಗೆ ಕರೆತಂದು ಮಹಾಬುದ್ಧಿಶಾಲಿಯಾದ ವಜ್ರನೆಂಬುವನನ್ನು ಯದುರಾಜನನ್ನಾಗಿ ಮಾಡಿದನು

೩. ಇತ್ತಲಾಗಿ ಭಗವಂತನಾದ ಶ್ರೀಕೃಷ್ಣನು ತನ್ನ ಆತ್ಮದಲ್ಲಿಯೂ ಸಕಲಭೂತಗಳಲ್ಲಿಯೂ ವಾಸುದೇವನೆಂಬುದಾಗಿ ಕರೆಯಿಸಿಕೊಳ್ಳಲ್ಪಡುವ ಆ ಪರಬ್ರಹ್ಮನನ್ನು ಅನುಸಂಧಾನಮಾಡಿದನು.

ಸ ಮಾನಯನ್ದ್ವಿಜವಚೋ ದುರ್ವಾಸಾ ಯದುವಾಚ ಹ ।
ಯೋಗಯುಕ್ತೋಽಭವತ್ಪಾದಂ ಕೃತ್ವಾ ಜಾನುನಿ ಸತ್ತಮಾಃ ॥ ೪ ॥

ಸಂಪ್ರಾಪ್ತೋ ವೈ ಜರಾ ನಾಮ ತದಾ ತತ್ರ ಸ ಲುಬ್ಧಕಃ ।
ಮುಶಲಶೇಷಲೋಹಸ್ಯ ಸಾಯಕಂ ಧಾರಯನ್ಪರಂ ॥ ೫ ॥

ಸ ತತ್ಪಾದಂ ಮೃಗಾಕಾರಂ ಸಂಮವೇಕ್ಷ್ಯ ವ್ಯವಸ್ಥಿತಃ ।
ತತೋ ವಿವ್ಯಾಧ ತೇನೈವ ತೋಮರೇಣ ದ್ವಿಜೋತ್ತಮಾಃ ॥ ೬ ॥

ಗತಶ್ಚ ದದೃಶೇ ತತ್ರ ಚತುರ್ಬಾಹುಧರಂ ನರಂ ।
ಪ್ರಣಿಪತ್ಯಾಹ ಚೈವೈನಂ ಪ್ರಸೀದೇತಿ ಪುನಃ ಪುನಃ ॥ ೭ ॥

ಅಜಾನತಾ ಕೃತಮಿದಂ ಮಯಾ ಹರಿಣಶಂಕಯಾ ।
ಕ್ಷಮ್ಯತಾಮಾತ್ಮಪಾಪೇನ ದಗ್ಧಂ ಮಾ ದಗ್ಧುಮರ್ಹಸಿ ॥ ೮ ॥

---

೪. ಎಲೈ ಸಾಧುವರ್ಯನೇ, ಕೃಷ್ಣನು ಹಿಂದೆ ದುರ್ವಾಸನು ಹೇಳಿದ್ದ ಮಾತಿಗೆ ಮಾನ್ಯತೆಯನ್ನಿತ್ತು, ತನ್ನ ಮಂಡಿಯಮೇಲೆ ಕಾಲನ್ನಿಟ್ಟುಕೊಂಡು ಕುಳಿತು ಯೋಗದಲ್ಲಿ ತಲ್ಲೀನನಾದನು.

೫. ಆಗ ಅಲ್ಲಿಗೆ ಸಾಂಬನು ಹೆತ್ತ ಮುಸಲದ ಚೂರೊಂದನ್ನು ಪಡೆದಿದ್ದ ಜರಾ ಎಂಬ ಬೇಡನು ಅದನ್ನು ಬಾಣವನ್ನಾಗಿ ಮಾಡಿಕೊಂಡು ಅಲ್ಲಿಗೆ ಬಂದನು.

೬. ಅವನು ದೂರದಲ್ಲಿಯೇ ಶ್ರೀಕೃಷ್ಣನ ಕಾಲು ಮೃಗದಂತೆ ಆಕಾರವನ್ನು ತಾಳಿ ಇದ್ದುದರಿಂದ ಯಾವುದೋ ಮೃಗವೆಂದು ಭಾವಿಸಿ ಆ ಮುಸಲ ಖಂಡದ ಬಾಣದಿಂದ ಬೀಸಿ ಹೊಡೆದನು.

೭. ಅನಂತರ ಬಳಿಗೆ ಹೋಗಿ ನೋಡಲು ಚತುರ್ಬಾಹುಗಳಿಂದ ರಂಜಿಸುತ್ತಿರುವ ಪುರುಷನೋರ್ವನು ಕಾಣಿಸಿದನು. ಆಗವನು ಮನ್ನಿಸು, ಮನ್ನಿಸು ಎಂದು ಪುನಃಪುನಃ ನಮಸ್ಕರಿಸಿ ಪ್ರಾರ್ಥಿಸಿದನು.

೮. ನಾನು ತಿಳಿಯದೆ ಜಿಂಕೆಯೆಂದು ಭಾವಿಸಿ ಈರೀತಿ ಮಾಡಿಬಿಟ್ಟೆನು ಇದನ್ನು ಕ್ಷಮಿಸು. ನಾನು ನನ್ನ ಪಾಪದಿಂದಲೇ ಬೆಂದುಹೋಗಿದೇನೆ. ಮರಳಿ ನನ್ನನ್ನು ಸುಡಬೇಡ ಎಂದು ಬೇಡಿದನು.

॥ ವ್ಯಾಸ ಉವಾಚ ॥

ತತಸ್ತಂ ಭಗವಾನಾಹ ನಾಸ್ತಿ ತೇ ಭಯಮಣ್ವಪಿ ।
ಗಚ್ಛ ತ್ವಂ ಮತ್ಪ್ರಸಾದೇನ ಲುಬ್ಧ ಸ್ವರ್ಗೇಶ್ವರಾಸ್ಪದಂ ॥ ೯ ॥

॥ ವ್ಯಾಸ ಉವಾಚ ॥

ವಿಮಾನಮಾಗತಂ ಸದ್ಯಸ್ತದ್ವಾಕ್ಯಸಮನಂತರಂ ।
ಆರುಹ್ಯ ಪ್ರಯಯೌ ಸ್ವರ್ಗಂ ಲುಬ್ಧಕಸ್ತತ್ಪ್ರಸಾದತಃ ॥ ೧೦ ॥

ಗತೇ ತಸ್ಮಿನ್ಸ ಭಗವಾನ್ಸಂಯೋಜ್ಯಾತ್ಮಾನಮಾತ್ಮನಿ ।
ಬ್ರಹ್ಮಭೂತೇಽವ್ಯಯೇಽಚಿಂತ್ಯೇ ವಾಸುದೇವಮಯೇಽಮಲೇ ॥ ೧೧ ॥

ಅಜನ್ಮನ್ಯಜರೇಽನಾಶಿನ್ಯಪ್ರಮೇಯೇಽಖಿಲಾತ್ಮನಿ ।
ತ್ಯಕ್ತ್ವಾ ಸ ಮಾನುಷಂ ದೇಹಮವಾಪ ತ್ರಿವಿಧಾಂ ಗತಿಂ ॥ ೧೨ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ವ್ಯಾಸರ್ಷಿಸಂವಾದೇ ಶ್ರೀಕೃಷ್ಣಚರಿತೇ ಕೃಷ್ಣಮಾನುಷೋತ್ಸರ್ಗಕಥನಂ ನಾಮೈಕಾದಶಾಧಿಕದ್ವಿಶತತಮೋಽಧ್ಯಾಯಃ

---

೯. ಎಲೈ ಮುನಿಗಳಿರಾ! ಆಗ ಭಗವಂತನು ಅವನನ್ನು ಕುರಿತು ನಿನಗೆ ಸ್ವಲ್ಪವೂ ಭಯವಿಲ್ಲ. ನನ್ನ ಅನುಗ್ರಹದಿಂದ ನೀನು ಸ್ವರ್ಗಕ್ಕೆ ಹೋಗುವೆ ಎಂದು ಹೇಳಿದನು.

೧೦. ಕೃಷ್ಣನು ಈರೀತಿ ಹೇಳಿ ಮುಗಿಸುವಷ್ಟರೊಳಗಾಗಿಯೇ ತಟ್ಟನೆ ಅಲ್ಲಿಗೆ ದೇವಲೋಕದ ವಿಮಾನವು ಬಂದಿತು. ಅದನ್ನು ಏರಿ ಆ ಬೇಡನು ಕೃಷ್ಣನ ಅನುಗ್ರಹದಿಂದ ಸ್ವರ್ಗಲೋಕವನ್ನು ಸೇರಿದನು.

೧೧.೧೨. ಅವನು ಹೊರಟುಹೋಗುತ್ತಲೇ ಕೃಷ್ಣನು, ನಾಶರಹಿತವೂ ಅಚಿಂತನೀಯವೂ, ನಿಷ್ಕಲಂಕವೂ ಜನ್ಮಜರಾಮೃತ್ಯುವರ್ಜಿತವೂ, ಅಮೇಯವೂ, ಸಕಲದೇವಸ್ವರೂಪವೂ ಆದ ವಾಸುದೇವಾತ್ಮಕವಾದ ಪರಬ್ರಹನಲ್ಲಿ ತನ್ನ ಮನಸ್ಸನ್ನು ನೆಲೆಗೊಳಿಸಿ, ಈ ಮಾನುಷದೇಹವನ್ನು ತೊರೆದು ದೈವತ್ವವನ್ನು ಹೊಂದಿದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ಶ್ರೀಕೃಷ್ಣಮಾನುಷಶರೀರವಿಸರ್ಜನವೆಂಬ ಇನ್ನೂರಹನ್ನೊಂದನೆಯ ಅಧ್ಯಾಯವು ಮುಗಿದುದು.

ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

# ದ್ವಾದಶಾಧಿಕದ್ವಿಶತತಮೋಽಧ್ಯಾಯಃ

---

॥ ವ್ಯಾಸ ಉವಾಚ ॥

ಅರ್ಜುನೋಽಪಿ ತದಾನ್ವಿಷ್ಯ ಕೃಷ್ಣರಾಮಕಲೇವರೇ ।
ಸಂಸ್ಕಾರಂ ಲಂಭಯಾಮಾಸ ತಥಾನ್ಯೇಷಾಮನುಕ್ರಮಾತ್ ॥ ೧ ॥

ಅಷ್ಟೌ ಮಹಿಷ್ಯಃ ಕಥಿತಾ ರುಕ್ಮಿಣೀಪ್ರಮುಖಾಸ್ತು ಯಾಃ ।
ಉಪಗೃಹ್ಯ ಹರೇರ್ದೇಹಂ ವಿವಿಶುಸ್ತಾ ಹುತಾಶನಂ ॥ ೨ ॥

ರೇವತೀ ಚೈವ ರಾಮಸ್ಯ ದೇಹಮಾಶ್ಲಿಷ್ಯ ಸತ್ತಮಾಃ ।
ವಿವೇಶ ಜ್ವಲಿತಂ ವಹ್ನಿಂ ತತ್ಸಂಗಾಹ್ಲಾದಶೀತಲಂ ॥ ೩ ॥

---

## ಇನ್ನೂರಹನ್ನೆರಡನೆಯ ಅಧ್ಯಾಯವು

೧. ಎಲೈ ಮುನಿಗಳಿರಾ ! ಇತ್ತಲಾಗಿ ಅರ್ಜುನನು, ಕೃಷ್ಣಬಲರಾಮರ ಶರೀರಗಳನ್ನು ಹುಡುಕಿ ಅದಕ್ಕೆ ಸಂಸ್ಕಾರಮಾಡಿದುದಲ್ಲದೆ ಕ್ರಮವಾಗಿ ಇತರರಿಗೂ ದೇಹಸಂಸ್ಕಾರಕೃತ್ಯಗಳನ್ನು ನೆರವೇರಿಸಿದನು.

೨. ಹಿಂದೆ ಹೇಳಿದ್ದ ರುಕ್ಮಿಣಿಯೇಮೊದಲಾದ ಶ್ರೀಕೃಷ್ಣನ ಎಂಟುಮಂದಿ ಪಟ್ಟಮಹಿಷಿಯರು ಆತನ ದೇಹದೊಂದಿಗೆ ಯಜ್ಞೇಶ್ವರನನ್ನು ಪ್ರವೇಶಿಸಿದರು.

೩. ಎಲೈ ಸಾಧುಶ್ರೇಷ್ಠರಿರಾ ! ಬಲರಾಮನ ಹೆಂಡತಿಯಾದ ರೇವತಿಯೂ ಸಹ ತನ್ನ ಪತಿಯ ಶರೀರವನ್ನಪ್ಪಿಕೊಂಡು ಬೆಂಕಿಯನ್ನು ಪ್ರವೇಶಿಸಿದಳು. ಅವಳಿಗೆ ತನ್ನ ಪತಿಯ ಶರೀರಸ್ಪರ್ಶದಿಂದ ಬೆಂಕಿಯೂ ತಂಪಾಗಿ ತೋರಿತು.

ಉಗ್ರಸೇನಸ್ತು ತಚ್ಛ್ರುತ್ವಾ ತಥೈವಾನಕದುಂದುಭಿಃ ।
ದೇವಕೀ ರೋಹಿಣೀ ಚೈವ ವಿವಿಶುರ್ಜಾತವೇದಸಂ ॥ ೪ ॥

ತತೋಽರ್ಜುನಃ ಪ್ರೇತಕಾರ್ಯಂ ಕೃತ್ವಾ ತೇಷಾಂ ಯಥಾವಿಧಿ ।
ನಿಶ್ಚಕ್ರಾಮ ಜನಂ ಸರ್ವಂ ಗೃಹೀತ್ವಾ ವಜ್ರಮೇವ ಚ ॥ ೫ ॥

ದ್ವಾರವತ್ಯಾ ವಿನಿಷ್ಕ್ರಾಂತಾಃ ಕೃಷ್ಣಪತ್ನ್ಯಃ ಸಹಸ್ರಶಃ ।
ವಜ್ರಂ ಜನಂ ಚ ಕೌಂತೇಯಃ ಪಾಲಯನ್ ಶನನಕೈರ್ಯಯೌ ॥ ೬ ॥

ಸಭಾ ಸುದರ್ಮಾ ಕೃಷ್ಣೇನ ಮರ್ತ್ಯಲೋಕೇ ಸಮಾಹೃತಾ ।
ಸ್ವರ್ಗಂ ಜಗಾಮ ಭೋ ವಿಪ್ರಾಃ ಪಾರಿಜಾತಶ್ಚ ಪಾದಪಃ ॥ ೭ ॥

ಯಸ್ಮಿನ್ದಿನೇ ಹರಿರ್ಯಾತೋ ದಿವಂ ಸಂತ್ಯಜ್ಯ ಮೇದಿನೀಂ ।
ತಸ್ಮಿನ್ದಿನೇಽವತೀರ್ಣೋಽಯಂ ಕಾಲಕಾಯಃ ಕಲಿಃ ಕಿಲ ॥ ೮ ॥

---

೪. ಇದೆಲ್ಲವನ್ನೂ ಕೇಳಿ ಉಗ್ರಸೇನನೂ, ವಸುದೇವನೂ, ದೇವಕಿಯೂ, ರೋಹಿಣಿಯೂ, ಅಗ್ನಿಯನ್ನು ಪ್ರವೇಶಿಸಿದರು.

೫. ಅನಂತರ ಅರ್ಜುನನು ಅವರೆಲ್ಲರಿಗೂ ಪ್ರೇತ ಕೃತ್ಯಗಳನ್ನು ವಿಧಿವತ್ತಾಗಿ (ಔರ್ಧ್ವದೈಹಿಕ) ನೆರವೇರಿಸಿ ದ್ವಾರಾವತಿಯಲ್ಲಿದ್ದ ಜನರೆಲ್ಲರನ್ನೂ ವಜ್ರನನ್ನೂ ಕರೆದುಕೊಂಡು ಹೊರಟನು.

೬. ಆ ಕೌಂತೇಯನು ದ್ವಾರಾವತಿಯಿಂದ ಹೊರಟು ಬರುತ್ತಿರುವ ಸಾವಿರಾರುಮಂದಿ ಕೃಷ್ಣನ ಮಡದಿಯರನ್ನೂ, ವಜ್ರನನ್ನೂ, ದ್ವಾರಕಾವಾಸಿಗಳನ್ನೂ ಸರಿಯಾಗಿ ನೋಡಿಕೊಳ್ಳುತ್ತಾ ಮೆಲ್ಲಮೆಲ್ಲನೆ ಹೋಗುತ್ತಿದ್ದನು.

೭. ಎಲೈ ವಿಪ್ರರೇ, ಹಿಂದೆ ಕೃಷ್ಣನು ಭೂಲೋಕಕ್ಕೆ ತಂದಿದ್ದ ದೇವಸಭೆಯಾದ ಸುಧರ್ಮೆಯೂ, ಪಾರಿಜಾತವೃಕ್ಷವೂ ಪುನಃ ಸ್ವರ್ಗಕ್ಕೇ ತೆರಳಿದವು.

೮. ಯಾವ ದಿವಸ ಶ್ರೀಕೃಷ್ಣನು ಮರ್ತ್ಯಲೋಕವನ್ನು ಬಿಟ್ಟು ತನ್ನ ಸ್ವಸ್ಥಾನವನ್ನು ತೆರಳಿದನೋ ಅದೇ ದಿವಸವೇ ಕಪ್ಪಾದ ಶರೀರವುಳ್ಳ ಕಲಿಯು ಈ ಭೂಲೋಕಕ್ಕೆ ಕಾಲಿಟ್ಟನು.

ಪ್ಲಾವಯಾಮಾಸ ತಾಂ ಶೂನ್ಯಾಂ ದ್ವಾರಕಾಂ ಚ ಮಹೋದಧಿಃ ।
ಯದುಶ್ರೇಷ್ಠಗೃಹಂ ತ್ವೇಕಂ ನಾಪ್ಲಾವಯತ ಸಾಗರಃ ॥ ೯ ॥

ನಾತಿಕ್ರಾಮತಿ ಭೋ ವಿಪ್ರಾಸ್ತದದ್ಯಾಪಿ ಮಹೋದಧಿಃ ।
ನಿತ್ಯಂ ಸಂನಿಹಿತಸ್ತತ್ರ ಭಗವಾನ್ಕೇಶವೋ ಯತಃ ॥ ೧೦ ॥

ತದತೀವ ಮಹಾಪುಣ್ಯಂ ಸರ್ವಪಾತಕನಾಶನಂ ।
ವಿಷ್ಣುಕ್ರೀಡಾನ್ವಿತಂ ಸ್ಥಾನಂ ದೃಷ್ಟ್ವಾ ಪಾಪಾತ್ಪ್ರಮುಚ್ಯತೇ ॥ ೧೧ ॥

ಪಾರ್ಥಃ ಪಂಚನದೇ ದೇಶೇ ಬಹುಧಾನ್ಯಧನಾನ್ವಿತೇ ।
ಚಕಾರ ವಾಸಂ ಸರ್ವಸ್ಯ ಜನಸ್ಯ ಮುನಿಸತ್ತಮಾಃ ॥ ೧೨ ॥

ತತೋ ಲೋಭಃ ಸಮಭವತ್ಪಾರ್ಥೇನೈಕೇನ ಧನ್ವಿನಾ ।
ದೃಷ್ಟ್ವಾ ಸ್ತ್ರಿಯೋ ನೀಯಮಾನಾ ದಸ್ಯೂನಾಂ ನಿಹಿತೇಶ್ವರಾಃ ॥ ೧೩ ॥

---

೯. ದ್ವಾರಕಿಯು ಬರಿದಾಗುತ್ತಲೇ ಸಮುದ್ರವು ಅದನ್ನು ಮುಳುಗಿಸಿಬಿಟ್ಟಿತು. ಆದರೆ ಶ್ರೀಕೃಷ್ಣನ ಅರಮನೆಯನ್ನು ಮಾತ್ರ ಅದು ಮುಳುಗಿಸಲಿಲ್ಲ.

೧೦. ಎಲೈ ಬ್ರಾಹ್ಮಣೋತ್ತಮರೇ! ಇಂದಿಗೂ ಸಹ ಆ ಅರಮನೆಯನ್ನು ಸಮುದ್ರವು ಅತಿಕ್ರಮಿಸಿ ಮುಟ್ಟಲಾರದು. ಏಕೆಂದರೆ ಅಲ್ಲಿ ಭಗವಂತನಾದ ಶ್ರೀಕೃಷ್ಣನು ಶಾಶ್ವತವಾಗಿ ನೆಲೆಸಿರುವನು.

೧೧. ಆ ದ್ವಾರಕಿಯು ಮಹಾಪುಣ್ಯತಮವಾದುದು. ಎಲ್ಲ ವಿಧವಾದ ಪಾಪಗಳನ್ನೂ ಪರಿಹರಿಸುವಂಥದು. ವಿಷ್ಣುವಿನ ನಾನಾವಿಧವಾದ ಲೀಲೆಗಳಿಗೆ ಆಶ್ರಯವಾಗಿದ್ದ ಆ ಪ್ರದೇಶವನ್ನು ನೋಡಿದ ಮಾತ್ರಕ್ಕೇ ಎಲ್ಲ ಪಾಪಗಳೂ ಪರಿಹಾರವಾಗುವುವು.

೧೨. ಎಲೈ ಮುನಿಶ್ರೇಷ್ಠರಿರಾ! ಇತ್ತಲಾಗಿ ಅರ್ಜುನನು ಧನ ಧಾನ್ಯಗಳಿಂದ ತುಂಬಿ ತುಳುಕಾಡುತ್ತಿರುವ ಪಂಚನದ (ಪಂಜಾಬ್) ದೇಶದಲ್ಲಿ ಆ ಜನರೆಲ್ಲರಿಗೂ ನಿವಾಸವನ್ನು ಏರ್ಪಡಿಸಿದನು.

೧೩. ಆಗ ಒಡೆಯನನ್ನು ಕಳೆದುಕೊಂಡ ಅಸಂಖ್ಯಾತರಾದ ಸ್ತ್ರೀಯರನ್ನು ಧನುರ್ಧಾರಿಯಾದ ಪಾರ್ಥನೊಬ್ಬನೇ ಕರೆದೊಯ್ಯುತ್ತಿರುವುದನ್ನು ಕಂಡು ಆಕಡೆಯಿದ್ದ ಕಳ್ಳರಿಗೆ ದುರಾಸೆಯಂಕುರಿಸಿತು.

ತತಸ್ತೇ ಪಾಪಕರ್ಮಾಣೋ ಲೋಭೋಪಹತಚೇತಸಃ ।
ಆಭೀರಾ ಮಂತ್ರಯಾಮಾಸುಃ ಸಮೇತ್ಯಾತ್ಯಂತದುರ್ಮದಾಃ ॥ ೧೪ ॥

॥ ಆಭೀರಾ ಊಚುಃ ॥

ಅಯಮೇಕೋಽರ್ಜುನೋ ಧನ್ವೀ ಸ್ತ್ರೀಜನಂ ನಿಹತೇಶ್ವರಂ ।
ನಯತ್ಯಸ್ಮಾನತಿಕ್ರಮ್ಯ ಧಿಗೇತತ್ಕ್ರಿಯತಾಂ ಬಲಂ ॥ ೧೫ ॥

ಹತ್ವಾ ಗರ್ವಸಮಾರೂಢೋ ಭೀಷ್ಮದ್ರೋಣಜಯದ್ರಥಾನ್ ।
ಕರ್ಣಾದೀಂಶ್ಚ ನ ಜಾನಾತಿ ಬಲಂ ಗ್ರಾಮನಿವಾಸಿನಾಂ ॥ ೧೬ ॥

ಬಲಜ್ಯೇಷ್ಠಾನ್ನರಾನನ್ಯಾನ್ಗ್ರಾಮ್ಯಾಂಶ್ಚೈವ ವಿಶೇಷತಃ ।
ಸರ್ವಾನೇವಾವಜಾನಾತಿ ಕಿಂ ವೋ ಬಹುಭಿರುತ್ತರೈಃ ॥ ೧೭ ॥

---

೧೪. ಅನಂತರ ಪಾಪಕೃತ್ಯಗಳಲ್ಲೇ ನಿರತರಾದ ಆ ಮದಾಂಧರಾದ ಆಭೀರಜಾತಿಯ (ಗೊಲ್ಲ) ರಸುಗಳು ದುರಾಸೆಗೊಳಪಟ್ಟು ಒಂದುಕಡೆ ಸೇರಿ ಆಲೋಚನೆ ಮಾಡಿದರು.

೧೫. ಈ ಧನುರ್ಧಾರಿಯಾದ ಅರ್ಜುನನೊಬ್ಬನೇ ಬೇರೆರಕ್ಷಕರಿಲ್ಲದ ಈ ಸ್ತ್ರೀಸಮುದಾಯವನ್ನೂ ನಮ್ಮನ್ನೂ ಲಕ್ಷ್ಯಕ್ಕೆ ತಾರದೆ ಕರೆದೊಯ್ಯುತ್ತಿರುವನು. ಛೀ, ಛೀ, ಎಂತಹ ಅಕಾರ್ಯವಿದು? ನಾವೀಗ ಬಲವನ್ನು ಪ್ರದರ್ಶಿಸಲೇ ಬೇಕು.

೧೬. ಆ ಅರ್ಜುನನು ಭೀಷ್ಮ, ದ್ರೋಣ, ಜಯದ್ರಥ, ಕರ್ಣ ಮೊದಲಾದ ಮಹಾರಥರನ್ನು ಗೆದ್ದುಬಿಟ್ಟಿರುವೆನೆಂಬ ಗರ್ವದಿಂದ ಬೀರುತ್ತಿರುವನು. ಆವನಿಗೆ ಹಳ್ಳಿಯವರ ಪರಾಕ್ರಮವೇನೆಂಬುದು ಇನ್ನೂ ತಿಳಿಯದು.

೧೭. ಅವನು ಬಲಾಧಿಕರಾದ ಇತರ ಪುರುಷರನ್ನು ಅಸಡ್ಡೆಯಿಂದ ಕಾಣುವನು. ಹಳ್ಳಿಯವರನ್ನಂತೂ ಇನ್ನೂ ಹೆಚ್ಚಾಗಿ ಅವಮಾನಕರವಾಗಿ ತುಚ್ಛತೆಯಿಂದ ನೋಡುವನು. ಅನೇಕ ಮಾತುಗಳಿಂದೇನು ಪ್ರಯೋಜನ?

॥ ವ್ಯಾಸ ಉವಾಚ ॥

ತತೋ ಯಷ್ಟಿಪ್ರಹರಣಾ ದಸ್ಯವೋ ಲೋಷ್ಟಹಾರಿಣಃ ।
ಸಹಸ್ರಶೋಽಭ್ಯಧಾವಂತ ತಂ ಜನಂ ನಿಹತೇಶ್ವರಂ ।
ತತೋ ನಿವೃತ್ತಃ ಕೌಂತೇಯಃ ಪ್ರಾಹಾಭೀರಾನ್ಹಸನ್ನಿವ ॥ ೧೮ ॥

॥ ಅರ್ಜುನ ಉವಾಚ ॥

ನಿವರ್ತಧ್ವಮಧರ್ಮಜ್ಞಾ ಯದೀತೋ ನ ಮುಮೂರ್ಷವಃ ॥ ೧೯ ॥

॥ ವ್ಯಾಸ ಉವಾಚ ॥

ಅವಜ್ಞಾಯ ವಚಸ್ತಸ್ಯ ಜಗೃಹುಸ್ತೇ ತದಾ ಧನಂ ।
ಸ್ತ್ರೀಜನಂ ಚಾಪಿ ಕೌಂತೇಯಾದ್ವಿಷ್ವಕ್ಸೇನಪರಿಗ್ರಹಂ ॥ ೨೦ ॥

ತತೋಽರ್ಜುನೋ ಧನುರ್ದಿವ್ಯಂ ಗಾಂಡೀವಮಜರಂ ಯುಧಿ ।
ಆರೋಪಯಿತುಮಾರೇಭೇ ನ ಶಶಾಕ ಸ ವೀರ್ಯವಾನ್ ॥ ೨೧ ॥

---

೧೮. ಈರೀತಿಯಾಗಿ ಪರಸ್ಪರ ಆಲೋಚಿಸಿ ಆ ದಸ್ಯುಗಳು ದೊಣ್ಣೆಗಳನ್ನೂ ಕವಣೆಗಳನ್ನೂ ತೆಗೆದುಕೊಂಡು ಒಡೆಯನಿಲ್ಲದ ಆ ಸ್ತ್ರೀಸಮುದಾಯದ ಕಡೆ ಓಡುತ್ತಾ ನುಗ್ಗಿ ಬಂದರು.

೧೯. ಆಗ ಕೌಂತೇಯನು ಹಿಂದಿರುಗಿ ನೋಡಿ ಆ ಭೀರರನ್ನು ಅಪಹಾಸ ಮಾಡುವವನಂತೆ ಅವರನ್ನು ಕುರಿತು, "ಎಲೈ ಅಧರ್ಮನಿರತರೇ, ನಿಮಗೆ ಸಾಯಬೇಕೆಂದು ಇಷ್ಟವಿಲ್ಲದಿದ್ದರೆ ಇಲ್ಲಿಂದ ಹೀಗೆಯೇ ಹಿಂದಿರುಗಿರಿ" ಎಂದನು.

೨೦. ಎಲೈ ಮುನಿಗಳಿರಾ! ಆದಸ್ಯುಗಳು ಅರ್ಜುನನ ಮಾತನ್ನು ಲಕ್ಷ್ಯವೇ ಮಾಡದೆ, ಶ್ರೀಕೃಷ್ಣನ ಪತ್ನಿಯರಾದ ಆ ಸ್ತ್ರೀಯರನ್ನೂ ದ್ರವ್ಯರಾಶಿಯನ್ನೂ ಅಪಹರಿಸಿದರು.

೨೧. ಆಗ ಅರ್ಜುನನು ಯುದ್ಧದಲ್ಲಿ ಹೆಸರಾಂತ ತನ್ನ ಗಾಂಡೀವವೆಂಬ ದಿವ್ಯಧನುಸ್ಸನ್ನು ಹೆದೆಯೇರಿಸಹೋದನು. ಆದರೇನು? ಅಸಮಸಾಹಸಿಯಾದ ಅರ್ಜುನನಿಗೆ ಅದು ಸಾಗಲಿಲ್ಲ.

ಚಕಾರ ಸಜ್ಜಂ ಕೃಚ್ಛ್ರಾತ್ತು ತದಭೂಚ್ಛಿಥಿಲಂ ಪುನಃ ।
ನ ಸಸ್ಮಾರ ತಥಾಸ್ತ್ರಾಣಿ ಚಿಂತಯನ್ನಪಿ ಪಾಂಡವಃ ॥ ೨೨ ॥

ಶರಾನ್ಮುಮೋಚ ಚೈತೇಷು ಪಾರ್ಥಃ ಶೇಷಾನ್ಸ ಹರ್ಷಿತಃ ।
ನ ಭೇದಂ ತೇ ಪರಂ ಚಕ್ರುರಸ್ತಾ ಗಾಂಡೀವಧನ್ವನಾ ॥ ೨೩ ॥

ವಹ್ನಿನಾ ಚಾಕ್ಷಯಾ ದತ್ತಾಃ ಶರಾಸ್ತೇऽಪಿ ಕ್ಷಯಂ ಯಯುಃ ।
ಯುಧ್ಯತಃ ಸಹ ಗೋಪಾಲೈರರ್ಜುನಸ್ಯಾಭವತ್ಕ್ಷಯಃ ॥ ೨೪ ॥

ಅಚಿಂತಯತ್ತು ಕೌಂತೇಯಃ ಕೃಷ್ಣಸ್ಯೈವ ಹಿ ತದ್ಬಲಂ ।
ಯನ್ಮಯಾ ಶರಸಂಘಾತೈಃ ಸಬಲಾ ಭೂಭೃತೋ ಜಿತಾಃ ॥ ೨೫ ॥

---

೨೨. ಕಷ್ಟಪಟ್ಟು ಒಂದುಸಲ ಬಿಲ್ಲಿಗೆ ಹೆದೆಯೇರಿಸಿದ್ದಾಯಿತು. ಆದರೆ ಮರಳಿ ಅದು ಸಡಿಲವಾಗಿಬಿಟ್ಟಿತು. ಆ ಪಾಂಡುಪುತ್ರನು ಎಷ್ಟೇ ಸ್ಮರಿಸಿಕೊಂಡರೂ ಅವನಿಗೆ ದಿವ್ಯಾಸ್ತ್ರಗಳು ನೆನಪಿಗೇ ಬರಲಿಲ್ಲ.

೨೩. ಆಮೇಲೆ ಅರ್ಜುನನು ಇತರ ಬಾಣಗಳನ್ನು ತೆಗೆದುಕೊಂಡು ಆದಸ್ಯುಗಳಮೇಲೆ ಪ್ರಯೋಗಿಸಿದನು. ಆದರೇನು? ಗಾಂಡೀವಿಯೆನಿಸಿಕೊಂಡ ಅವನ ಬಾಣಗಳು ಆದಸ್ಯುಗಳಿಗೆ ಗಾಯವನ್ನು ಮಾಡಲಾರದೆಯೇ ಹೋದುವು.

೨೪. ಹಿಂದೆ ಅಗ್ನಿಯಿಂದ ತನಗೆ ಕೊಡಲ್ಪಟ್ಟಿದ್ದ, ಎಂದಿಗೂ ಬರಿದಾಗದಿರುವ ಬಾಣಗಳು ಇಂದು ಬೇಗನೇ ಬರಿದಾಗಿಬಿಟ್ಟುವು. ಆ ಗೊಲ್ಲರೊಡನೆ ಹೋರಾಡುತ್ತಿದ್ದ ಅರ್ಜುನನಿಗೆ ಬಹುಮಟ್ಟಿಗೆ ಆಯಾಸವುಂಟಾಯಿತು.

೨೫. ಆಗ ಅರ್ಜುನನು, -"ಹಿಂದೆ ತಾನು ಸಕಲ ಭೂಪಾಲಕರನ್ನೂ ಬಾಣಗಳಿಂದ ಗೆದ್ದುದು ಶ್ರೀಕೃಷ್ಣನ ಬಲದಿಂದಲೇ" ಎಂಬುದಾಗಿ ತನ್ನ ಮನಸ್ಸಿನಲ್ಲಿ ಆಲೋಚಿಸಿದನು.

ಮಿಷತಃ ಪಾಂಡುಪುತ್ರಸ್ಯ ತತಸ್ತಾಃ ಪ್ರಮದೋತ್ತಮಾಃ ।
ಅಪಾಕೃಷ್ಯಂತ ಚಾಭೀರೈಃ ಕಾಮಾಚ್ಚಾನ್ಯಾಃ ಪ್ರವವ್ರಜುಃ ॥ ೨೬ ॥

ತತಃ ಶರೇಷು ಕ್ಷೀಣೇಷು ಧನುಷ್ಕೋಟ್ಯಾ ಧನಂಜಯಃ ।
ಜಘಾನ ದಸ್ಯೂಂಸ್ತೇ ಚಾಸ್ಯ ಪ್ರಹಾರಾನ್ ಜಹಸುರ್ದ್ವಿಜಾಃ ॥ ೨೭ ॥

ಪಶ್ಯತಸ್ತ್ವೇವ ಪಾರ್ಥಸ್ಯ ವೃಷ್ಣ್ಯಂಧಕವರಸ್ತ್ರಿಯಃ ।
ಜಗ್ಮುರಾದಾಯ ತೇ ಮ್ಲೇಚ್ಛಾಃ ಸಮಂತಾನ್ಮುನಿಸತ್ತಮಾಃ ॥ ೨೮ ॥

ತತಃ ಸ ದುಃಖಿತೋ ಜಿಷ್ಣುಃ ಕಷ್ಟಂ ಕಷ್ಟಮಿತಿ ಬ್ರುವನ್ ।
ಅಹೋ ಭಗವತಾ ತೇನ ಮುಕ್ತೋಽಸ್ಮೀತಿ ರುರೋದ ವೈ ॥ ೨೯ ॥

---

೨೬. ಬಳಿಕ ಅರ್ಜುನನು ನೋಡುತ್ತಿರುವಂತೆಯೇ ಆಭೀರರು ಶ್ರೀ ಕೃಷ್ಣನ ಕೈಹಿಡಿದಿದ್ದ ಉತ್ತಮಾಂಗನೆಯರನ್ನು ಎಳೆದುಯ್ಯಲು ಮೊದಲು ಮಾಡಿದರು. ಕೆಲಮಂದಿ ಸ್ತ್ರೀಯರು ತಾವಾಗಿಯೇ ಆಸೆಪಟ್ಟು ಅವರ ಹಿಂದೆ ಹೊರಟರು.

೨೭. ಎಲೈ ಬ್ರಾಹ್ಮಣರಿರಾ! ಅನಂತರ ಅರ್ಜುನನು ತನ್ನ ಬಾಣಗಳೆಲ್ಲವೂ ಮುಗಿದುಹೋದುದನ್ನು ಕಂಡು ತನ್ನ ಬಿಲ್ಲಿನ ತುದಿಯಿಂದಲೇ ಆದಸ್ಯುಗಳನ್ನು ಪ್ರಹರಿಸಿದನು. ಅವರು ಇವನ ಪ್ರಹಾರಗಳನ್ನು ಲೆಕ್ಕಿಸದೆ ಹಾಸ್ಯಮಾಡಿ ನಕ್ಕರು.

೨೮. ಓ ಮುನಿಗಳಿರಾ! ಆ ಅರ್ಜುನನು ನೋಡುತ್ತಿದ್ದಂತೆಯೇ ಅಧಮಜಾತಿಯವರು ಸಿಕ್ಕಿದ ಕಡೆಗೆ ಆ ವೃಷ್ಣಿ ಮತ್ತು ಅಂಧಕವಂಶದ ಉತ್ತಮಾಂಗನೆಯರನ್ನು ಸೆಳೆದುಕೊಂಡು ಹೋದರು.

೨೯. ಆಗ ಜಿಷ್ಣು (ಜಯಶೀಲ) ವೆಂದು ಪ್ರಸಿದ್ಧನಾದ ಅರ್ಜುನನು ಬಹುದುಃಖಿತನಾಗಿ, "ಅಯ್ಯೋ, ಕಷ್ಟ, ಕಷ್ಟ" ಎನ್ನುತ್ತಾ, "ಅಯ್ಯೋ, ಭಗವಂತನಾದ ಶ್ರೀಕೃಷ್ಣನು ನನ್ನನ್ನು ತೊರೆದನು ಎಂದು ಗೋಳಾಡಿದನು.

॥ ಅರ್ಜುನ ಉವಾಚ ॥

ತದ್ಧನುಸ್ತಾನಿ ಚಾಸ್ತ್ರಾಣಿ ಸ ರಥಸ್ತೇ ಚ ವಾಜಿನಃ ।
ಸರ್ವಮೇಕಪದೇ ನಷ್ಟಂ ದಾನಮಶ್ರೋತ್ರಿಯೇ ಯಥಾ ॥ ೩೦ ॥

ಅಹೋ ಚಾತಿ ಬಲಂ ದೈವಂ ವಿನಾ ತೇನ ಮಹಾತ್ಮನಾ ।
ಯದಸಾಮರ್ಥ್ಯಯುಕ್ತೋಽಹಂ ನೀಚೈರ್ನೀತಃ ಪರಾಭವಂ ॥ ೩೧ ॥

ತೌ ಬಾಹೂ ಸ ಚ ಮೇ ಮುಷ್ಟಿಃ ಸ್ಥಾನಂ ತತ್ಸೋಽಸ್ಮಿ ಚಾರ್ಜುನಃ ।
ಪುಣ್ಯೇನೇವ ವಿನಾ ತೇನ ಗತಂ ಸರ್ವಮಸಾರತಾಂ ॥ ೩೨ ॥

ಮಮಾರ್ಜುನತ್ವಂ ಭೀಮಸ್ಯ ಭೀಮತ್ವಂ ತತ್ಕೃತಂ ಧ್ರುವಂ ।
ವಿನಾ ತೇನ ಯದಾಭೀರೈರ್ಜಿತೋಽಹಂ ಕಥಮನ್ಯಥಾ ॥ ೩೩ ॥

---

೩೦. ಆ ಧನುಸ್ಸು, ಬಾಣಗಳು, ತೇರು, ಕುದುರೆಗಳು, ಇವೆಲ್ಲವೂ ಕೂಡ, ಶ್ರೋತ್ರಿಯನಲ್ಲದ ಬ್ರಾಹ್ಮಣನಿಗೆ ಕೊಟ್ಟ ದಾನದಂತೆ ಒಂದೇ ಬಾರಿಗೆ ಹಾಳಾದುವು.

೩೧. ಅಬ್ಬಾ! ದೈವ ಬಲವೇ ಬಲವು. ಏಕೆಂದರೆ ಆ ಮಹಾತ್ಮನು ಇಲ್ಲದುದರಿಂದ ಸಾಮರ್ಥ್ಯವನ್ನು ಕಳೆದುಕೊಂಡು ಈ ನೀಚರ ಕೈಲಿ ಸೋಲ ಬೇಕಾಯಿತು.

೩೨. ಅದೇ ನನ್ನ ಕೈಗಳು. ಅದೇ ನನ್ನ ಮುಷ್ಟಿ. ಅದೇ ನನ್ನ ಜಾಗ. ಅದೇ ಅರ್ಜುನನೇ ನಾನು. ಆದರೆ ಪುಣ್ಯಫಲದಂತೆ ಶ್ರೀಕೃಷ್ಣನು ನನಗೆ ಜೊತೆಯಲ್ಲಿ ಇಲ್ಲದುದರಿಂದ ಅದೆಲ್ಲವೂ ನಿಸ್ಸಾರವಾಯಿತು.

೩೩. ಆ ಪರಮಾತ್ಮನು ಇಲ್ಲದಿರುವುದರಿಂದ ಇಂದಿಗೆ, ನಾನು ಅರ್ಜುನ ನಾಗಿರುವುದೂ, ಭೀಮನು ಭೀಮನೆನಿಸಿರುವುದೂ ಮುಗಿದಂತೆಯೇ ಆಯಿತು. ಇದು ನಿಜವು. ಇಲ್ಲದಿದ್ದರೆ ನಾನು ಹೇಗೆ ಗೊಲ್ಲರಿಗೆ ಸೋಲುತ್ತಿದ್ದೆನು?

॥ ವ್ಯಾಸ ಉವಾಚ ॥

ಇತ್ಥಂ ವದನ್ನಯಾ ಜಿಷ್ಣುರಿಂದ್ರಪ್ರಸ್ಥಂ ಪುರೋತ್ತಮಂ ।
ಚಕಾರ ತತ್ರ ರಾಜಾನಂ ವಜ್ರಂ ಯಾದವನಂದನಂ ॥ ೩೪ ॥

ಸ ದದರ್ಶ ತತೋ ವ್ಯಾಸಂ ಫಾಲ್ಗುನಃ ಕಾನನಾಶ್ರಯಂ ।
ತಮುಪೇತ್ಯ ಮಹಾಭಾಗಂ ವಿನಯೇನಾಭ್ಯವಾದಯತ್ ॥ ೩೫ ॥

ತಂ ವಂದಮಾನಂ ಚರಣಾವವಲೋಕ್ಯ ಮುನಿಶ್ಚಿತಂ ।
ಉವಾಚ ಪಾರ್ಥಂ ವಿಚ್ಛಾಯಃ ಕಥಮತ್ಯಂತಮಿದ್ಯ ಶಃ ॥ ೩೬ ॥

ಅಜಾರಜೋನುಗಮನಂ ಬ್ರಹ್ಮಹತ್ಯಾಥವಾ ಕೃತಾ ।
ಜಯಾಶಾಭಂಗದುಃಖೀ ವಾ ಭ್ರಷ್ಟಚ್ಛಾಯೋಽಸಿ ಸಾಂಪ್ರತಂ ॥ ೩೭ ॥

ಸಾಂತಾನಿಕಾದಯೋ ವಾ ತೇ ಯಾಚಮಾನಾ ನಿರಾಕೃತಾಃ ।
ಅಗಮ್ಯಸ್ತ್ರೀರತಿರ್ವಾಪಿ ತೇನಾಸಿ ವಿಗತಪ್ರಭಃ ॥ ೩೮ ॥

---

೩೪. ಎಲೈ ಮುನಿಗಳಿರಾ! ಹೀಗೆ ವ್ಯಥೆಪಡುತ್ತಾ ಅರ್ಜುನನು ಇಂದ್ರಪ್ರಸ್ಥ ನಗರಕ್ಕೆ ಹೋಗಿ ಅಲ್ಲಿ ಯದುವಂಶೀಯನಾದ ವಜ್ರನನ್ನು ರಾಜನನ್ನಾಗಿ ಮಾಡಿದನು.

೩೫. ಅನಂತರ ಅರ್ಜುನನು ಕಾಡಿಗೆ ತೆರಳಿ ಅಲ್ಲಿದ್ದ ಮಹಾನುಭಾವನಾದ ವ್ಯಾಸಮಹರ್ಷಿಯನ್ನು ಕಾಣಲು ವ್ಯಾಸಮಹರ್ಷಿಯು ಇಂತೆಂದು ಪ್ರಶ್ನಿಸಿದನು. ಇದೇನು? ಏಕೆ ಇಷ್ಟುಮಟ್ಟಿಗೆ ಕಾಂತಿ ಹೀನನಾಗಿರುವೆ?

೩೬-೩೭. ಎಲ್ಲಾದರೂ ಆಡಿನ ಧೂಳಿನ ಹಿಂದೆಯೇ ನಡೆದೆಯಾ? ಇಲ್ಲವೇ ಬ್ರಹ್ಮಹತ್ಯೆಯನ್ನು ಮಾಡಿದೆಯಾ? ಇಲ್ಲದಿದ್ದರೆ ಯಾವ ದೇಶವನ್ನಾದರೂ ಗೆಲ್ಲಬೇಕೆಂದಿದ್ದು ಅದು ಸಾಗದೆ ದುಃಖಪಡುತ್ತಿರುವೆಯಾ? ಇದೇಕೆ ಈಗ ಇಷ್ಟು ಸಪ್ಪಗೆ ಇರುವೆ?

೩೮. ಅಥವಾ ಸಾಂತಾನಿಕರೆಂಬುವರು ಏನನ್ನಾದರೂ ಕೇಳಲು **ಬಂದಿ**ದ್ದಾಗ ಇಲ್ಲವೆಂದು ಹೊರದೂಡಿದೆಯಾ? ಇಲ್ಲದಿದ್ದರೆ ಅಗಮ್ಯಾ**ಗಮನ**ವೇನಾದರೂ ಸಂಘಟಿಸಿತೇ? ಆದುದರಿಂದಲೇ ನಿನ್ನ ತೇಜಸ್ಸು **ಇ**ಷ್ಟುಮಟ್ಟಿಗೆ ಕುಂದಿರುವುದು.

ಭುಂಕ್ತೇ ಪ್ರದಾಯ ವಿಪ್ರೇಭ್ಯೋ ಮಿಷ್ಟಮೇಕಮುಥೋ ಭವಾನ್ ।
ಕಿಂ ವಾ ಕೃಪಣವಿತ್ತಾನಿ ಹೃತಾನಿ ಭವತಾರ್ಜುನ ॥ ೩೯ ॥

ಕಚ್ಚಿನ್ನ ಸೂರ್ಯವಾತಸ್ಯ ಗೋಚರತ್ವಂ ಗತೋಽರ್ಜುನ ।
ದುಷ್ಟಚಕ್ಷುರ್ಹತೋ ವಾಪಿ ನಿಃಶ್ರೀಕಃ ಕಥಮನ್ಯಥಾ ॥ ೪೦ ॥

ಸ್ಪೃಷ್ಟೋ ನಖಾಂಭಸಾ ವಾಪಿ ಘಟಾಂಭಃಪ್ರೋಕ್ಷಿತೋಽಪಿ ವಾ ।
ತೇನಾತೀವಾಸಿ ವಿಚ್ಛಾಯೋ ನ್ಯೂನೈರ್ವಾ ಯುಧಿ ನಿರ್ಜಿತಃ ॥ ೪೧ ॥

॥ ವ್ಯಾಸ ಉವಾಚ ॥

ತತಃ ಪಾರ್ಥೋ ವಿನಿಃಶ್ವಸ್ಯ ಶ್ರೂಯತಾಂ ಭಗವನ್ನಿತಿ ।
ಪ್ರೋಕ್ತೋ ಯಥಾವದಾಚಷ್ಟ ವಿಪ್ರಾ ಆತ್ಮಪರಾಭವಂ ॥ ೪೨ ॥

॥ ಅರ್ಜುನ ಉವಾಚ ॥

ಯದ್ಬಲಂ ಯಚ್ಚ ನಸ್ತೇಜೋ ಯದ್ವೀರ್ಯಂ ಯತ್ಪರಾಕ್ರಮಃ ।
ಯಾ ಶ್ರೀಶ್ಛಾಯಾ ಚ ನಃ ಸೋಽಸ್ಮಾನ್ಪರಿತ್ಯಜ್ಯ ಹರಿರ್ಗತಃ ॥ ೪೩ ॥

---

೩೯. ನೀನು ಮೊದಲು ಬ್ರಾಹ್ಮಣರಿಗೆ ಬೇಡಿದುದನ್ನಿತ್ತು ಬಳಿಕಲ್ಲವೇ ಮಿಷ್ಟಾನ್ನವನ್ನು ಭುಜಿಸುತ್ತಿದ್ದದ್ದು? ಓ ಅರ್ಜುನಾ ಎಲ್ಲಾದರೂ ಬಡವನೊಬ್ಬನು ಕೂಡಿಹಾಕಿಕೊಂಡಿದ್ದ ಹಣವನ್ನು ಅಪಹರಿಸಿಬಿಟ್ಟೆಯಾ?

೪೦. ಹೋಗಲಿ, ಬಿಸಿಗಾಳಿಗೆ ನೀನು ಸಿಗಲಿಲ್ಲ ತಾನೇ? ಅಥವಾ ಯಾರ ಕೆಟ್ಟದೃಷ್ಟಿಯಾದರೂ ನಿನಗೆ ಬಡಿಯಿತೇ? ಇಲ್ಲದಿದ್ದರೆ ನಿನ್ನ ಮುಖದಲ್ಲಿ ಏಕೆ ಈರೀತಿ ಕಳೆಯು ಇಲ್ಲದಿರುವುದು?

೪೧. ನಿನ್ನಮೇಲೆ ಯಾರಾದರೂ ಉಗುರುಕೊನೆಗಳ ನೀರನ್ನು ಹಾರಿಸಿರಬೇಕು! ಆದ್ದರಿಂದಲೇ ನಿನ್ನ ಮುಖವು ಬಣ್ಣಗೆಟ್ಟಿರುವುದು ಎಂದನು.

೪೨. ಎಲೈ ಬ್ರಾಹ್ಮಣೋತ್ತಮರೇ! ಆಗ ಅರ್ಜುನನು ನೀಳವಾಗಿ ಉಸಿರುಬಿಟ್ಟು "ಹೇ ಭಗವನ್, ಆಲಿಸು" ಎಂದು ತಾನು ಸೋತ ಸಂಗತಿಯನ್ನು ನಡೆದಂತೆ ತಿಳಿಸಿದನು.

೪೩. ಯಾವನು ನಮಗೆ ಬಲವೂ, ತೇಜಸ್ಸೂ, ಶಕ್ತಿಯೂ, ಪರಾಕ್ರಮವೂ, ಐಶ್ವರ್ಯವೂ, ಕಾಂತಿಯೂ ಆಗಿದ್ದನೋ ಆ ಶ್ರೀಹರಿಯು ನಮ್ಮನ್ನು ಅಗಲಿ ಹೊರಟುಹೋದನು.

ಇತರೇಣೇವ ಮಹತಾ ಸ್ಮಿತಪೂರ್ವಾಭಿಭಾಷಿಣಾ ।
ಹೀನಾ ವಯಂ ಮುನೇ ತೇನ ಜಾತಾಸ್ತೃಣಮಯಾ ಇವ ॥ ೪೪ ॥

ಅಸ್ತ್ರಾಣಾಂ ಸಾಯಕಾನಾಂ ಚ ಗಾಂಡೀವಸ್ಯ ತಥಾ ಮಮ ।
ಸಾರತಾ ಯಾಭವನ್ಮೂರ್ತಾ ಸ ಗತಃ ಪುರುಷೋತ್ತಮಃ ॥ ೪೫ ॥

ಯಸ್ಯಾವಲೋಕನಾದಸ್ಮಾನ್ ಶ್ರೀರ್ಜಯಃ ಸಂಪದುನ್ನತಿಃ ।
ನ ತತ್ಯಾಜ ಸ ಗೋವಿಂದಸ್ತ್ಯಕ್ತ್ವಾಸ್ಮಾನ್ಭಗವಾನ್ಗತಃ ॥ ೪೬ ॥

ಭೀಷ್ಮದ್ರೋಣಾಂಗರಾಜಾದ್ಯಾಸ್ತಥಾ ದುರ್ಯೋಧನಾದಯಃ ।
ಯತ್ಪ್ರಭಾವೇನ ನಿರ್ದಗ್ಧಾಃ ಸ ಕೃಷ್ಣಸ್ತ್ಯಕ್ತವಾನ್ಭುವಂ ॥ ೪೭ ॥

---

೪೪. ಎಲೈ ಮುನಿಯೇ, ನಗುನಗುತ್ತಾ ಮಾತನಾಡುತ್ತಿದ್ದ ಶ್ರೀಕೃಷ್ಣನು ಯಾವನೋ ಒಬ್ಬ ಸಂಬಂಧವೇ ಇಲ್ಲದ ಮನುಷ್ಯನಂತೆ ನಮ್ಮನ್ನು ತೊರೆದು ಬಿಟ್ಟನು. ಅವನಿಲ್ಲದೆ ಇರುವುದರಿಂದ ನಾವೀಗ ಹುಲ್ಲಿನ ಮನುಷ್ಯರಂತೆ ನಿಸ್ಸಾರರಾಗಿದೇವೆ.

೪೫. ನನ್ನ ಅಸ್ತ್ರಗಳಿಗೂ, ಬಾಣಗಳಿಗೂ, ಗಾಂಡೀವಕ್ಕೂ, ಹೆಚ್ಚೇಕೆ? ನನಗೂ ಯಾವನು ಆಕಾರ ಧರಿಸಿರುವ ಸಾರತೆ (ಬಲ) ಯೆನಿಸಿದ್ದನೋ ಆ ಪುರುಷೋತ್ತಮನು ನಮ್ಮನ್ನಗಲಿದನು.

೪೬. ಯಾವನು ನೋಡಿದ ಮಾತ್ರದಿಂದಲೇ, ಲಕ್ಷ್ಮಿಯೂ, ಜಯವೂ, ಸಂಪತ್ತೂ, ಅಭಿವೃದ್ಧಿಯೂ ನಮ್ಮನ್ನು ಬಿಟ್ಟು ಅಗುಲುತ್ತಿರಲಿಲ್ಲವೋ ಆ ಗೋವಿಂದನು ನಮ್ಮನ್ನು ಬಿಟ್ಟು ಹೊರಟುಹೋದನು.

೪೭. ಯಾವನ ಮಹಿಮೆಯಿಂದ ಭೀಷ್ಮ, ದ್ರೋಣ, ಕರ್ಣ, ದುರ್ಯೋಧನಾದಿ ಮಹಾವೀರರು ಸುಟ್ಟು ಬೂದಿಯಾದರೋ ಅಂತಹ ಕೃಷ್ಣನು ಭೂಮಿಯನ್ನು ಪರಿತ್ಯಜಿಸಿದನು.

ನಿರ್ಯೌವನಾ ಹತಶ್ರೀಕಾ ಭ್ರಷ್ಟಚ್ಛಾಯೇವ ಮೇ ಮಹೀ ।
ವಿಭಾತಿ ತಾತ ನೈಕೋऽಹಂ ವಿರಹೇ ತಸ್ಯ ಚಕ್ರಿಣಃ ॥ ೪೮ ॥

ಯಸ್ಯಾನುಭಾವಾದ್ಭೀಷ್ಮಾದ್ಯೈರ್ಮಯ್ಯಗ್ನೌ ಶಲಭಾಯಿತಂ ।
ವಿನಾ ತೇನಾದ್ಯ ಕೃಷ್ಣೇನ ಗೋಪಾಲೈರಸ್ಮಿ ನಿರ್ಜಿತಃ ॥ ೪೯ ॥

ಗಾಂಡೀವಂ ತ್ರಿಷು ಲೋಕೇಷು ಖ್ಯಾತಂ ಯದನುಭಾವತಃ ।
ಮಮ ತೇನ ವಿನಾಭೀರೈರ್ಲಗುಡೈಸ್ತು ತಿರಸ್ಕೃತಂ ॥ ೫೦ ॥

ಸ್ತ್ರೀಸಹಸ್ರಾಣ್ಯನೇಕಾನಿ ಹ್ಯನಾಥಾನಿ ಮಹಾಮುನೇ ।
ಯತತೋ ಮಮ ನೀತಾನಿ ದಸ್ಯುಭಿರ್ಲಗುಡಾಯುಧೈಃ ॥ ೫೧ ॥

---

೪೮. ಎಲೈ ತಂದೆಯೇ! ನನಗೀಗ ಈ ಭೂಮಿಯು ಯೌವನವನ್ನು ಕಳೆದುಕೊಂಡಂತೆಯೂ, ಸಂಪತ್ತು ಸೂರೆಹೋದಂತೆಯೂ ಕಳೆಗುಂದಿದಂತೆಯೂ ತೋರುತ್ತಿರುವುದು. ಆ ಚಕ್ರಧರನಿಲ್ಲದೆ ನಾನು ಒಂಟಿಯಾಗಿ ಇರಲಾರೆನು.

೪೯. ಯಾವನ ಪ್ರಭಾವದಿಂದ, ಭೀಷ್ಮ ಮೊದಲಾದ ವೀರಾದಿವೀರರು ಬೆಂಕಿಯಂತೆ ತೇಜಶ್ಶಾಲಿಯಾಗಿದ್ದ ನನಗೆ ಸಿಕ್ಕಿ ಪತಂಗಗಳಂತೆ ಬೆಂದು ಹೋದರೋ ಆ ಕೃಷ್ಣನು ಈಗ ಇಲ್ಲದಿರುವುದರಿಂದ ನಾನು ಗೊಲ್ಲರ ಕೈಲಿ ಸೋತು ಬರಬೇಕಾಯಿತು.

೫೦. ಯಾವಾತನ ಮಹಿಮೆಯಿಂದ ನನ್ನ ಗಾಂಡೀವವು ಮೂರು ಲೋಕಗಳಲ್ಲಿಯೂ ಪ್ರಖ್ಯಾತವಾಯಿತೋ ಆ ಗಾಂಡೀವವು ಇಂದು ಕೃಷ್ಣನಿಲ್ಲದುದರಿಂದ ಆಭೀರರ ದೊಣ್ಣೆಗಳ ಮುಂದೆ ಅವಮಾನ ಹೊಂದಿತು.

೫೧. ಓ ಮುನೀಂದ್ರ! ದಿಕ್ಕಿಲ್ಲದೆ ಅಸಹಾಯರಾದ ಸಾವಿರಾರು ಸ್ತ್ರೀಯರು, ನಾನೆಷ್ಟು ಪ್ರಯತ್ನಿಸಿದರೂ ಸಾಗದೆ, ಬರಿಯ ಕೋಲನ್ನು ಹಿಡಿದು ಬಂದಿದ್ದ ದಸ್ಯುಗಳಿಂದ ಒಯ್ಯಲ್ಪಟ್ಟರು.

ಆನೀಯಮಾನನಾಭೀರೈಃ ಸರ್ವಂ ಕೃಷ್ಣಾವರೋಧನಂ ।
ಕೃತಂ ಯಷ್ಟಿಪ್ರಹರಣೈಃ ಪರಿಭೂಯ ಬಲಂ ಮಮ ॥ ೫೨ ॥

ನಿಃಶ್ರೀಕತಾ ನ ಮೇ ಚಿತ್ರಂ ಯಜ್ಜೀವಾಮಿ ತದದ್ಭುತಂ ।
ನೀಚಾವಮಾನಪಂಕಾಂಕೀ ನಿರ್ಲಜ್ಜೋಽಸ್ಮಿ ಪಿತಾಮಹ ॥ ೫೩ ॥

॥ ವ್ಯಾಸ ಉವಾಚ ॥

ಶ್ರುತ್ವಾಹಂ ತಸ್ಯ ತದ್ವಾಕ್ಯಮಬ್ರವಂ ದ್ವಿಜಸತ್ತಮಾಃ ।
ದುಃಖಿತಸ್ಯ ಚ ದೀನಸ್ಯ ಪಾಂಡವಸ್ಯ ಮಹಾತ್ಮನಃ ॥ ೫೪ ॥

ಅಲಂ ತೇ ವ್ರೀಡಯಾ ಪಾರ್ಥ ನ ತ್ವಂ ಶೋಚಿತುಮರ್ಹಸಿ ।
ಅವೇಹಿ ಸರ್ವಭೂತೇಷು ಕಾಲಸ್ಯ ಗತಿರೀದೃಶೀ ॥ ೫೫ ॥

---

೫೨. ದಂಡಮಾತ್ರ ಸಹಾಯರಾದ ಆಭೀರರು ನನ್ನ ಬಲವನ್ನೂ ಲೆಕ್ಕಿಸದೆ, ನಾನು ಕರೆದುಕೊಂಡು ಹೋಗುತ್ತಿದ್ದ ಕೃಷ್ಣನ ಅಂತಃಪುರ ಸ್ತ್ರೀಯರನ್ನು ಅಪಹರಿಸಿದರು.

೫೩. ಓ ಮುತ್ತಜ್ಜ! ನನ್ನ ಮುಖವು ವಿವರ್ಣವಾಗಿರುವುದು. (ಕಾಂತಿಹೀನತೆಯು) ಆಶ್ಚರ್ಯವೇನೂ ಅಲ್ಲ. ನಾನಿನ್ನೂ ಬದುಕಿರುವುದೇ ಆಶ್ಚರ್ಯವು. ನೀಚರಿಂದ ಸಂಭವಿಸಿದ ಅವಮಾನವೆಂಬ ಕೆಸರು ಮೆತ್ತಿಕೊಂಡಿದ್ದರೂ, ನಾಚಿಕೆಯಿಲ್ಲದೆ ಇರುವೆನಲ್ಲಾ ಎಂದನು.

೫೪. ಎಲೈ ವಿಪ್ರರೇ, ಈರೀತಿ ಅರ್ಜನನಾಡಿದ ಮಾತನ್ನು ಕೇಳಿ ನಾನು ಹೇಳತೊಡಗಿದೆನು. ಮಹಾತ್ಮನಾದ ಆ ಪಾಂಡುಪುತ್ರನು ಬಹುವಾಗಿ ದುಃಖಿಸುತ್ತಾ ದೈನ್ಯವನ್ನು ತೋರುತ್ತಿದ್ದನು.

೫೫. ಓ ಪಾರ್ಥ, ನಿನ್ನ ನಾಚಿಕೆಯನ್ನು ಬಿಡು. ನೀನು ದುಃಖಪಡಬೇಕಾಗಿಲ್ಲ. ಎಲ್ಲ ಪ್ರಾಣಿಗಳಿಗೂ ಇಂತಹ ಕಾಲಗತಿಯು ಒದಗುವುದೆಂದು ತಿಳಿ.

ಕಾಲೋ ಭವಾಯ ಭೂತಾನಾಮಭವಾಯ ಚ ಪಾಂಡವ ।
ಕಾಲಮೂಲಮಿದಂ ಜ್ಞಾತ್ವಾ ಕುರು ಸ್ಥೈರ್ಯಮತೋಽರ್ಜುನ ॥ ೫೬ ॥

ನದ್ಯಃ ಸಮುದ್ರಾ ಗಿರಯಃ ಸಕಲಾ ಚ ವಸುಂಧರಾ ।
ದೇವಾ ಮನುಷ್ಯಾಃ ಪಶವಸ್ತರವಶ್ಚ ಸರೀಸೃಪಾಃ ॥ ೫೭ ॥

ಸೃಷ್ಟಾಃ ಕಾಲೇನ ಕಾಲೇನ ಪುನರ್ಯಾಸ್ಯಂತಿ ಸಂಕ್ಷಯಂ ।
ಕಾಲಾತ್ಮಕಮಿದಂ ಸರ್ವಂ ಜ್ಞಾತ್ವಾ ಶಮಮವಾಪ್ನು ಹಿ ॥ ೫೮ ॥

ಯಥಾತ್ಥ ಕೃಷ್ಣಮಾಹಾತ್ಮ್ಯಂ ತತ್ತಥೈವ ಧನಂಜಯ ।
ಭಾರಾವತಾರಕಾರ್ಯಾರ್ಥಮವತೀರ್ಣಃ ಸ ಮೇದಿನೀಂ ॥ ೫೯ ॥

ಭಾರಾಕ್ರಾಂತಾ ಧರಾ ಯಾತಾ ದೇವಾನಾಂ ಸಂನಿಧೌ ಪುರಾ ।
ತದರ್ಥಮವತೀರ್ಣೋಽಸೌ ಕಾಮರೂಪೀ ಜನಾರ್ದನಃ ॥ ೬೦ ॥

---

೫೬. ಓ ಪಾಂಡುಪುತ್ರ ! ಹುಟ್ಟುವುದಕ್ಕೂ ಕಾಲವೇ ಕಾರಣವು. ಸಾಯುವುದಕ್ಕೂ ಕಾಲವೇ ಕಾರಣವು. ಇದೆಲ್ಲವೂ ಕಾಲಾಧೀನವೆಂಬುದಾಗಿ ತಿಳಿದು ನಿನ್ನ ಮನಸ್ಸಿಗೆ ಧೈರ್ಯವನ್ನು ತಂದುಕೋ.

೫೭-೫೮. ಈ ನದಿಗಳೂ, ಸಮುದ್ರಗಳೂ. ಬೆಟ್ಟಗಳೂ, ಎಲ್ಲ ಭೂಪ್ರದೇಶವೂ, ದೇವತೆಗಳೂ, ಮನುಷ್ಯರೂ, ಪಶುಗಳೂ, ವೃಕ್ಷಗಳೂ, ಸರ್ಪಗಳೂ ಇವೆಲ್ಲವೂ ಕಾಲದಿಂದಲೇ ಸೃಷ್ಟಿಸಲ್ಪಟ್ಟವು. ಅದೇಕಾಲದಿಂದಲೇ ನಾಶವನ್ನೂ ಹೊಂದುವುವು. ಇದೆಲ್ಲವೂ ಕಾಲಸ್ವರೂಪವೆಂಬುದಾಗಿಯೇ ತಿಳಿದು ಮನಸ್ಸಿಗೆ ಶಾಂತಿಯನ್ನು ತಂದುಕೋ.

೫೯. ಓ ಧನಂಜಯ ! ನೀನು ಹೇಳಿದಂತೆಯೇ ಕೃಷ್ಣನ ಮಹಿಮೆಯು ಇರುವುದು. ಅವನು ಭೂಭಾರವನ್ನು ನಿವಾರಣೆಮಾಡವುದುಕ್ಕೋಸ್ಕರವೇ ಅವತಾರವಮಾಡಿದನು.

೬೦. ಹಿಂದೆ ತನಗೆ ಉಂಟಾದ ಹೊರೆಯನ್ನು ತಾಳಲಾರದೆ ಭೂಮಿಯು ದೇವತೆಗಳಬಳಿ ಮೊರೆಯಿಡಲು ಹೋಗಿದ್ದಳು. ಅದಕ್ಕೋಸ್ಕರವಾಗಿಯೇ ಇಚ್ಛಾರೂಪಧರನಾದ ಜನಾರ್ದನನು ಅವತರಿಸಿದನು.

ತಚ್ಚ ನಿಷ್ಪಾದಿತಂ ಕಾರ್ಯಮಶೇಷಾ ಭೂಭೃತೋ ಹತಾಃ ।
ವೃಷ್ಣ್ಯನ್ಧಕಕುಲಂ ಸರ್ವಂ ತಥಾ ಪಾರ್ಥೋಽಪಸಂಹೃತಂ ॥ ೬೧ ॥

ನ ಕಿಂಚಿದನ್ಯತ್ಕರ್ತವ್ಯಮಸ್ಯ ಭೂಮಿತಲೇಽರ್ಜುನ ।
ತತೋ ಗತಃ ಸ ಭಗವಾನ್ಕೃತಕೃತ್ಯೋ ಯಥೇಚ್ಛಯಾ ॥ ೬೨ ॥

ಸೃಷ್ಟಿಂ ಸರ್ಗೇ ಕರೋತ್ಯೇಷ ದೇವದೇವಃ ಸ್ಥಿತಿಂ ಸ್ಥಿತೌ ।
ಅಂತೇ ತಾಪಸಮರ್ಥೋಽಯಂ ಸಾಂಪ್ರತಂ ವೈ ಯಥಾ ಕೃತಂ ॥ ೬೩ ॥

ತಸ್ಮಾತ್ಪಾರ್ಥ ನ ಸಂತಾಪಸ್ತ್ವಯಾ ಕಾರ್ಯಃ ಪರಾಭವಾತ್ ।
ಭವಂತಿ ಭವಕಾಲೇಷು ಪುರುಷಾಣಾಂ ಪರಾಕ್ರಮಾಃ ॥ ೬೪ ॥

---

೬೧. ಆ ಕೆಲಸವು ನೆರವೇರಿವೇರಿಸಲ್ಪಟ್ಟಿತು. ಎಲ್ಲ ದುಷ್ಟರಾಜರೂ ಸಂಹರಿಸಲ್ಪಟ್ಟರು. ಅದೇರೀತಿಯಾಗಿ ವೃಷ್ಣಿ ಮತ್ತು ಅಂಧಕರ ವಂಶವೂ ಕೊನೆಗಾಣಿಸಲ್ಪಟ್ಟಿತು.

೬೨. ಅರ್ಜುನ! ಆ ಕೃಷ್ಣನು ಈ ಭೂಮಿಯಲ್ಲಿ ಮಾಡಬೇಕಾದ ಕೆಲಸವಿನ್ನೇನೂ ಇಲ್ಲ. ಆದುದರಿಂದಲೇ ಆ ಭಗವಂತನು ತನ್ನ ಕೆಲಸವು ಮುಗಿಯಿತೆಂದು, ಸ್ವೇಚ್ಛೆಯಿಂದ ತೆರಳಿದನು.

೬೩. ಈ ದೇವಾದಿದೇವನೇ (ಜಗತ್ತನ್ನು) ಸೃಷ್ಟಿಸಮಯದಲ್ಲಿ ಸೃಷ್ಟಿಸುವನು. ರಕ್ಷಣಸಮಯದಲ್ಲಿ ರಕ್ಷಿಸುವನು. ಸಂಹಾರಸಮಯದಲ್ಲಿ ಎಲ್ಲವನ್ನೂ ಸಂಹರಿಸುವಮ. ಆದುದರಿಂದ ಈಗ ಮಾಡಿದುದೆಲ್ಲವೂ ಯುಕ್ತವೇ ಆಗಿರುವುದು.

೬೪. ಓ ಪಾರ್ಥ! ಆದುದರಿಂದ ನೀನು ಸೋಲು ಉಂಟಾಯಿತೆಂದು ವ್ಯಥೆಪಡಬೇಡ. ಕಾರ್ಯಗಳು ನಡೆಯಬೇಕಾದ ಸಂದರ್ಭವುಂಟಾದಾಗ ಎಲ್ಲಾ ಪುರುಷರಿಗೂ ಪರಾಕ್ರಮಗಳು ಉಂಟಾಗುವುವು.

**ಯತಸ್ತ್ವಯೈಕೇನ ಹತಾ ಭೀಷ್ಮದ್ರೋಣಾದಯೋ ನೃಪಾಃ ।**
**ತೇಷಾಮರ್ಜುನ ಕಾಲೋತ್ಥಃ ಕಿಂ ನ್ಯೂನಾಭಿಭವೋ ನ ಸಃ ॥ ೬೫ ॥**

**ವಿಷ್ಣೋಸ್ತಸ್ಯಾನುಭಾವೇನ ಯಥಾ ತೇಷಾಂ ಪರಾಭವಃ ।**
**ತ್ವತ್ತಸ್ತಥೈವ ಭವತೋ ದಸ್ಯುಭ್ಯೋಽಂತೇ ತದುದ್ಭವಃ ॥ ೬೬ ॥**

**ಸ ದೇವೋಽನ್ಯಶರೀರಾಣಿ ಸಮಾವಿಶ್ಯ ಜಗತ್ಸ್ಥಿತಿಂ ।**
**ಕರೋತಿ ಸರ್ವಭೂತಾನಾಂ ನಾಶಂ ಚಾಂತೇ ಜಗತ್ಪತಿಃ ॥ ೬೭ ॥**

**ಭವೋದ್ಭವೇ ಚ ಕೌಂತೇಯ ಸಹಾಯಸ್ತೇ ಜನಾರ್ದನಃ ।**
**ಭವಾಂತೇ ತ್ವದ್ವಿಪಕ್ಷಾಸ್ತೇ ಕೇಶವೇನಾವಲೋಕಿತಾಃ ॥ ೬೮ ॥**

---

೬೫. ಓ ಅರ್ಜುನ! ಆದುದರಿಂದಲೇ ಭೀಷ್ಮದ್ರೋಣಾದಿ ಮಹಾವೀರರು ನಿನ್ನೊಬ್ಬನಿಂದ ಆಗ ಹತರಾದುದು. ಅವರಿಗಿಂತಲೂ ಕಮ್ಮಿಯೆನಿಸಿದ ನಿನ್ನಿಂದ ಒದಗಿದ ಆ ಸೋಲು ಕಾಲವಶದಿಂದಲೇ ಅವರಿಗೆ ಉಂಟಾದುದಲ್ಲವೇ?

೬೬. ಆ ಪರಮಾತ್ಮನ ಮಹಿಮೆಯಿಂದಲೇ ನಿನ್ನಿಂದ ಅವರೆಲ್ಲರಿಗೂ ಸೋಲುವುಂಟಾದಂತೆ ಈ ಕೊನೆಗಾಲದಲ್ಲಿ ಆ ಪರಮಾತ್ಮನ ಬಲದಿಂದಲೇ ದಸ್ಯುಗಳಿಗೆ ನೀನು ಸೋಲಬೇಕಾಯಿತು.

೬೭. ಜಗತ್ಪ್ರಭುವಾದ ಆ ದೇವನೇ ಬೇರೆ ಶರೀರಗಳನ್ನು ಧರಿಸಿ ಪ್ರಪಂಚವನ್ನೂ ಪರಿಪಾಲಿಸುವನು ಮತ್ತು ಕೊನೆಯಲ್ಲಿ ಅದನ್ನು ನಾಶಮಾಡುವನು.

೬೮. ನಿನ್ನಿಂದ ನಡೆಯಬೇಕಾಗಿದ್ದ ಕೆಲಸಗಳ ಪ್ರಾರಂಭಸಮಯದಲ್ಲಿ ಆ ಜನಾರ್ದನನು ನಿನಗೆ ಸಹಾಯಕನಾಗಿ ನಿಂತನು. ಆ ಕೆಲಸಗಳೆಲ್ಲವೂ ಮುಗಿದಮೇಲೆ ನಿನ್ನ ಶತ್ರುಗಳಮೇಲೆ ಪರಮಾತ್ಮನ ದೃಷ್ಟಿಯು ನೆಲೆಸಿತು.

ಕಃ ಶ್ರದ್ಧಧ್ಯಾತ್ತ್ವಸಗಾಂಗೇಯಾನ್ಹನ್ಯಾಸ್ತ್ವಂ ಸರ್ವಕೌರವಾನ್ ।
ಆಭೀರೇಭ್ಯಶ್ಚ ಭವತಃ ಕಃ ಶ್ರದ್ಧಧ್ಯಾತ್ಪರಾಭವಂ ॥ ೬೯ ॥

ಪಾರ್ಥೈತತ್ಸರ್ವಭೂತೇಷು ಹರೇರ್ಲೀಲಾವಿಚೇಷ್ಟಿತಂ ।
ತ್ವಯಾ ಯತ್ಕೌರವಾ ಧ್ವಸ್ತಾ ಯದಾಭೀರೈರ್ಭವಾನ್ ಜಿತಃ ॥ ೭೦ ॥

ಗೃಹೀತ್ವಾ ದಸ್ಯುಭಿರ್ಯಚ್ಚ ರಕ್ಷಿತಾ ಭವತಾ ಸ್ತ್ರಿಯಃ ।
ತದಪ್ಯಹಂ ಯಥಾವೃತ್ತಂ ಕಥಯಾಮಿ ತವಾರ್ಜುನ ॥ ೭೧ ॥

ಅಷ್ಟಾವಕ್ರಃ ಪುರಾ ವಿಪ್ರ ಉದವಾಸರತೋಽಭವತ್ ।
ಬಹೂನ್ವರ್ಷಗಣಾನ್ಪಾರ್ಥ ಗೃಣನ್ಬ್ರಹ್ಮ ಸನಾತನಂ ॥ ೭೨ ॥

ಜಿತೇಷ್ವಸುರಸಂಘೇಷು ಮೇರುಪೃಷ್ಠೇ ಮಹೋತ್ಸವಃ ।
ಬಭೂವ ತತ್ರ ಗಚ್ಛಂತ್ಯೋ ದದೃಶುಸ್ತಂ ಸುರಸ್ತ್ರಿಯಃ ॥ ೭೩ ॥

---

೬೯. ಯಾವಾತನು ತಾನೇ, ಭೀಷ್ಮನು ಬೆಂಬಲವಾಗಿದ್ದ ಆ ಕೌರವರೆಲ್ಲರನ್ನೂ ನೀನು ಕೊಲ್ಲುವೆಯೆಂದೂ, ಅಂತಹ ನಿನ್ನನ್ನು ಸಾಮಾನ್ಯರಾದ ಗೊಲ್ಲರು ಸೋಲಿಸುವರೆಂದೂ ನಂಬುವನು?

೭೦. ಆದುದರಿಂದ ಎಲೈ ಪಾರ್ಥ, ನೀನು ಕೌರವರನ್ನು ಕೊಂದುದೂ, ನಿನ್ನನ್ನು ಆಭೀರರು ಜಯಿಸಿದುದೂ, ಆ ಪರಮಾತ್ಮನು ಸಕಲ ಭೂತಗಳಲ್ಲಿಯೂ ತೋರುವ ಲೀಲೆಯೇನೇ.

೭೧. ನೀನು ಕಾಪಾಡುತ್ತಿದ್ದ ಶ್ರೀಕೃಷ್ಣನ ಮಡದಿಯರನ್ನು ದಸ್ಯುಗಳು ಅಪಹರಿಸುದುದಕ್ಕೆ ಕಾರಣವನ್ನು ನಾನು ನಿನಗೆ ನಡೆದುದು ನಡೆದಹಾಗೆ ತಿಳಿಸುವೆನು.

೭೨. ಹಿಂದೆ ಅಷ್ಟಾವಕ್ರನೆಂಬ ಮುನಿಯು ಬಹು ಸಂವತ್ಸರಗಳ ಕಾಲ ನೀರಿನಲ್ಲಿ ನಿಂತು ಪರಬ್ರಹ್ಮನನ್ನು ಧ್ಯಾನಿಸುತ್ತಾ ಇದ್ದನು.

೭೩. ಆ ಸಮಯದಲ್ಲಿ ದೇವತೆಗಳು ದೈತ್ಯದಾನವರನ್ನು ಗೆದ್ದುದಕ್ಕಾಗಿ ಮೇರುಪರ್ವತದಲ್ಲಿ ಭಾರಿ ಉತ್ಸವವು ಜರುಗಿತು. ಆಗ ಅಲ್ಲಿಗೆ ಹೋಗುತ್ತಿದ್ದ ದೇವಾಂಗನೆಯರು ತಪಸ್ಸುಮಾಡುತ್ತಿದ್ದ ಮುನಿಯನ್ನು ಕಂಡರು.

ರಂಭಾ ತಿಲೋತ್ತಮಾದ್ಯಾಶ್ಚ ಶತಶೋಽಥ ಸಹಸ್ರಶಃ ।
ತುಷ್ಟುವುಸ್ತಂ ಮಹಾತ್ಮಾನಂ ಪ್ರಶಶಂಸುಶ್ಚ ಪಾಂಡವ ॥ ೭೪ ॥

ಆಕಂಠಮಗ್ನಂ ಸಲಿಲೇ ಜಟಾಭಾರಧರಂ ಮುನಿಂ ।
ವಿನಯಾವನತಾಶ್ಚೈವ ಪ್ರಣೇಮುಃ ಸ್ತೋತ್ರತತ್ಪರಾಃ ॥ ೭೫ ॥

ಯಥಾ ಯಥಾ ಪ್ರಸನ್ನೋಽಭೂತ್ತುಷ್ಟುವುಸ್ತಂ ತಥಾ ತಥಾ ।
ಸರ್ವಾಸ್ತಾಃ ಕೌರವಶ್ರೇಷ್ಠ ವರಿಷ್ಠಂ ತಂ ದ್ವಿಜನ್ಮನಾಂ ॥ ೭೬ ॥

॥ ಅಷ್ಟಾವಕ್ರ ಉವಾಚ ॥

ಪ್ರಸನ್ನೋಽಹಂ ಮಹಾಭಾಗಾ ಭವತೀನಾಂ ಯದಿಷ್ಯತೇ ।
ಮತ್ತಸ್ತದ್ವ್ರಿಯತಾಂ ಸರ್ವಂ ಪ್ರದಾಸ್ಯಾಮ್ಯಪಿ ದುರ್ಲಭಂ ॥ ೭೭ ॥

॥ ವ್ಯಾಸ ಉವಾಚ ॥

ರಂಭಾತಿಲೋತ್ತಮಾದ್ಯಾಶ್ಚ ದಿವ್ಯಾಶ್ಚಾಪ್ಸರಸೋಽಬ್ರುವನ್ ॥ ೭೮ ॥

---

೭೪. ಓ ಅರ್ಜುನ ! ನೂರುಗಟ್ಟಲೆ ಸಾವಿರಗಟ್ಟಲೆ ಗುಂಪುಗುಂಪಾಗಿ ಹೋಗುತ್ತಿದ್ದ ರಂಭಾ, ತಿಲೋತ್ತಮಾ ಮೊದಲಾದ ದೇವಸ್ತ್ರೀಯರು ಆ ಮಹಾತ್ಮನನ್ನು ಸ್ತೋತ್ರಮಾಡಿ ಹೊಗಳಿದರು.

೭೫. ಅಲ್ಲದೆ ಆರೀತಿ ಸ್ತುತಿಮಾಡುತ್ತಾ, ಕುತ್ತಿಗೆಯವರೆಗೂ ನೀರಿನಲ್ಲಿ ಮುಳುಗಿ ತಪಸ್ಸುಮಾಡುತ್ತಿದ್ದ ಜಟಾಭಾರದಿಂದ ರಂಜಿಸುತ್ತಿರುವ ತಲೆಯುಳ್ಳ ಆ ಮುನಿಗೆ ವಿನಯದಿಂದ ತಲೆಬಾಗಿ ನಮಸ್ಕಾರಮಾಡಿದರು.

೭೬. ಓ ಕೌರವಶ್ರೇಷ್ಠ ! ಆ ದೇವಾಂಗನೆಯರೆಲ್ಲರೂ ಆ ವಿಪ್ರೋತ್ತಮನು ತಮ್ಮಲ್ಲಿ ಪ್ರಸನ್ನತೆಯನ್ನು ತೋರಿದಹಾಗೆಲ್ಲಾ ತಾವೂ ಸ್ತೋತ್ರಮಾಡುವುದನ್ನು ಹೆಚ್ಚಿಸಿದರು.

೭೭. ಆಗ ಅಷ್ಟಾವಕ್ರನು ಅವರನ್ನು ಕುರಿತು, " ಎಲೈ ಭಾಗ್ಯಶಾಲಿನಿಯರೇ, ನನ್ನಿಂದ ನಿಮಗೆ ಏನಾಗಬೇಕಾಗಿರುವುದು ? ನಿಮಗೆ ಏನು ತೋರುವುದೋ ಅದನ್ನು ಕೇಳಿರಿ. ಅದು ದುರ್ಲಭವಾದರೂ ನಿಮಗೆ ಕೊಡುವೆನು " ಎಂದನು.

೭೮-೮೦. ಎಲೈ ಮುನಿಗಳಿರಾ ! ಆಗ ರಂಭೆ ತಿಲೋತ್ತಮೆ ಮೊದಲಾದ ದೇವಲೋಕದ ಅಪ್ಸರೆಯರು ಆ ಮಹರ್ಷಿಯನ್ನು ಕುರಿತು ' ಓ

॥ ಅಪ್ಸರಸ ಊಚುಃ ॥

ಪ್ರಸನ್ನೇ ತ್ವಯ್ಯಸಂಪ್ರಾಪ್ತಂ ಕಿಮಸ್ಮಾಕಮಿತಿ ದ್ವಿಜಾಃ ॥ ೭೯ ॥

ಇತರಾಸ್ತ್ವಬ್ರುವನ್ವಿಪ್ರ ಪ್ರಸನ್ನೋ ಭಗವನ್ಯದಿ ।
ತದಿಚ್ಛಾಮಃ ಪತಿಂ ಪ್ರಾಪ್ತುಂ ವಿಪ್ರೇಂದ್ರ ಪುರುಷೋತ್ತಮಂ ॥ ೮೦ ॥

॥ ವ್ಯಾಸ ಉವಾಚ ॥

ಏವಂ ಭವಿಷ್ಯತೀತ್ಯುಕ್ತ್ವಾ ಉತ್ತತಾರ ಜಲಾನ್ಮುನಿಃ ।
ತಮುತ್ತೀರ್ಣಂ ಚ ದದೃಶುರ್ವಿರೂಪಂ ವಕ್ರಮಷ್ಟಧಾ ॥ ೮೧ ॥

ತಂ ದೃಷ್ಟ್ವಾ ಗೂಹಮಾನಾನಾಂ ಯಾಸಾಂ ಹಾಸಃ ಸ್ಫುಟೋಽಭವತ್ ।
ತಾಃ ಶಶಾಪ ಮುನಿಃ ಕೋಪಮವಾಪ್ಯ ಕುರುನಂದನ ॥ ೮೨ ॥

॥ ಅಷ್ಟಾವಕ್ರ ಉವಾಚ ॥

ಯಸ್ಮಾದ್ವಿರೂಪರೂಪಂ ಮಾಂ ಮತ್ವಾ ಹಾಸಾವಮಾನನಾ ।
ಭವತೀಭಿಃ ಕೃತಾ ತಸ್ಮಾದೇಷ ಶಾಪಂ ದದಾಮಿ ವಃ ॥ ೮೩ ॥

---

ಮುನೀಂದ್ರ! ನೀನು ನಮ್ಮಲ್ಲಿ ಪ್ರಸನ್ನನಾದಮೇಲೆ ನಮಗೆ ಯಾವುದುತಾನೇ ಸಿದ್ಧಿಸಿದಂತಾಗಲಿಲ್ಲ?' ಎಂದರು. ಇನ್ನಿತರ ದೇವಾಂಗನೆಯರು ಮಾತ್ರ "ನೀನು ನಮಗೆ ಒಲಿದಿರುವುದೇ ನಿಜವಾದರೆ ಪುರುಷೋತ್ತಮನಾದ ಶ್ರೀಹರಿಯೇ ನಮ್ಮ ಕೈಹಿಡಿಯುವಂತೆ ಅನುಗ್ರಹಿಸು" ಎಂದರು.

೮೧. ಎಲೈ ದ್ವಿಜರಿರಾ! 'ನಿಮ್ಮಿಷ್ಟದಂತೆಯೇ ಆಗುವುದು' ಎಂದು ಹೇಳಿ ಆ ಮುನಿಯು ನೀರನ್ನು ಬಿಟ್ಟು ಮೇಲಕ್ಕೆದ್ದು ಬಂದನು. ಅವನು ಮೇಲಕ್ಕೆ ಬಂದೊಡನೆಯೇ ದೇಹವು ಎಂಟುಕಡೆ ಸೊಟ್ಟುಸೊಟ್ಟಾಗಿ ವಿಕಾರವಾಗಿರುವುದನ್ನು ಕಂಡರು.

೮೨. ಅದನ್ನು ಕಂಡು ದೇವಸ್ತ್ರೀಯರಿಗೆ ನಗುವು ಬಂದಿತು. ಕೆಲವರು ಅದನ್ನು ಎಷ್ಟೇ ಮರೆಮಾಚಿದರೂ ಸಾಧ್ಯವಾಗದೆ ಅವರು ನಕ್ಕುದು ತಿಳಿದು ಹೋಯಿತು. ಅರ್ಜುನ! ಆರೀತಿ ನಕ್ಕ ಹೆಂಗಸರನ್ನು ಕಂಡು ಆ ಮುನಿಗೆ ಕೋಪ ಬಂದು

೮೩–೮೪. "ನೀವೆಲ್ಲರೂ ನನ್ನ ರೂಪವು ವಿಕಾರವಾದುದೆಂದು ಭಾವಿಸಿ ಅಪಹಾಸ್ಯಮಾಡುತ್ತಾ ನಕ್ಕಿರಲ್ಲವೇ? ಆದುದರಿಂದ ನಿಮಗೆ ನಾನು ಶಾಪವನ್ನು

ಮತ್ಪ್ರಸಾದೇನ ಭರ್ತಾರಂ ಲಬ್ಧ್ವಾ ತು ಪುರುಷೋತ್ತಮಂ ।
ಮಚ್ಛಾಪೋಪಹತಾಃ ಸರ್ವಾ ದಸ್ಯುಹಸ್ತಂ ಗಮಿಷ್ಯಥ ॥ ೮೪ ॥

॥ ವ್ಯಾಸ ಉವಾಚ ॥

ಇತ್ಯುದೀರಿತಮಾಕರ್ಣ್ಯ ಮುನಿಸ್ತಾಭಿಃ ಪ್ರಸಾದಿತಃ ।
ಪುನಃ ಸುರೇಂದ್ರಲೋಕಂ ವೈ ಪ್ರಾಹ ಭೂಯೋ ಗಮಿಷ್ಯಥ ॥ ೮೫ ॥

ಏವಂ ತಸ್ಯ ಮುನೇಃ ಶಾಪಾದಷ್ಟಾವಕ್ರಸ್ಯ ಕೇಶವಂ ।
ಭರ್ತಾರಂ ಪ್ರಾಪ್ಯ ತಾಃ ಪ್ರಾಪ್ತಾ ದಸ್ಯುಹಸ್ತಂ ವರಾಂಗನಾಃ ॥ ೮೬ ॥

ತತ್ತ್ವಯಾ ನಾತ್ರ ಕರ್ತವ್ಯಃ ಶೋಕೋಽಲ್ಪೋಽಪಿ ಹಿ ಪಾಂಡವ ।
ತೇನೈವಾಖಿಲನಾಥೇನ ಸರ್ವಂ ತದುಪಸಂಹೃತಂ ॥ ೮೭ ॥

ಭವತಾಂ ಚೋಪಸಂಹಾರಮಾಸನ್ನಂ ತೇನ ಕುರ್ವತಾ ।
ಬಲಂ ತೇಜಸ್ತಥಾ ವೀರ್ಯಂ ಮಾಹಾತ್ಮ್ಯಂ ಚೋಪಸಂಹೃತಂ ॥ ೮೮ ॥

---

ಕೊಡುವೆನು. ನನ್ನ ಅನುಗ್ರಹದಿಂದ ನೀವು ಪುರುಷೋತ್ತಮನನ್ನೇ ಪತಿಯಾಗಿ ಪಡೆದರೂ, ಕೊನೆಗೆ ನನ್ನೀ ಶಾಪದಿಂದ ದಸ್ಯುಗಳ ಕೈಗೆ ಸಿಕ್ಕಿ ಬೀಳುವಂತಾಗಲಿ" ಎಂದನು.

೮೫. ಈರೀತಿ ಮುನಿಯು ಶಾಪವೀಯಲು ಆ ದೇವಸ್ತ್ರೀಯರು ಆತನನ್ನು ಪ್ರಸನ್ನೀಕರಿಸಿದರು. ಆಗ ಆತನು ಮರಳಿ ನೀವು ದೇವಲೋಕವನ್ನು ಸೇರಿರಿ" ಎಂದು ವಿಶಾಪವನ್ನಿತ್ತನು.

೮೬. ಹೀಗೆ ಅಷ್ಟಾವಕ್ರಮುನಿಯ ಶಾಪ ಬಲದಿಂದ ಆ ಉತ್ತಮ ಸ್ತ್ರೀಯರು ಶ್ರೀಕೃಷ್ಣನನ್ನೇ ಪತಿಯಾಗಿ ಪಡೆದರೂ ದಸ್ಯು ಹಸ್ತಕ್ಕೆ ಸಿಕ್ಕಿಬಿದ್ದರು.

೮೭. ಆದುದರಿಂದ, ಓ ಪಾಂಡುಪುತ್ರ! ನೀನು ಈ ವಿಷಯದಲ್ಲಿ ಸ್ವಲ್ಪವೂ ಶೋಕಪಡಬಾರದು. ಎಲ್ಲರಿಗೂ ಪ್ರಭುವೆನಿಸಿದ ಆತನಿಂದಲೇ ಅದೆಲ್ಲವೂ ಉಪಸಂಹರಿಸಲ್ಪಟ್ಟಿತು.

೮೮. ನಿಮ್ಮ ಕೊನೆಗಾಲವೂ ಸಮೀಪಿಸುತ್ತಿದೆಯಾದುದರಿಂದಲೇ ಆತನು ನಿಮ್ಮ ತೇಜಸ್ಸು, ವೀರ್ಯ, ಮಹಾತ್ಮ್ಯಗಳನ್ನು ಉಪಸಂಹರಿಸಿಬಿಟ್ಟನು.

ಜಾತಸ್ಯ ನಿಯತೋ ಮೃತ್ಯುಃ ಪತನಂ ಚ ತಥೋನ್ನತೇಃ ।
ವಿಪ್ರಯೋಗಾವಸಾನಂ ತು ಸಂಯೋಗಃ ಸಂಚಯಃ ಕ್ಷಯಃ ॥ ೮೯ ॥

ವಿಜ್ಞಾಯ ನ ಬುಧಾಃ ಶೋಕಂ ನ ಹರ್ಷಮುಪಯಾಂತಿ ಯೇ ।
ತೇಷಾಮೇವೇತರೇ ಚೇಷ್ಟಾಂ ಶಿಕ್ಷಂತಃ ಸಂತಿ ತಾದೃಶಾಃ ॥ ೯೦ ॥

ತಸ್ಮಾತ್ತ್ವಯಾ ನರಶ್ರೇಷ್ಠ ಜ್ಞಾತ್ವೈತದ್ಭ್ರಾತೃಭಿಃ ಸಹ ।
ಪರಿತ್ಯಜ್ಯಾಖಿಲಂ ರಾಜ್ಯಂ ಗಂತವ್ಯಂ ತಪಸೇ ವನಂ ॥ ೯೧ ॥

ತದ್ಗಚ್ಛ ಧರ್ಮರಾಜಾಯ ನಿವೇದ್ಯೈತದ್ವಚೋ ಮಮ ।
ಪರಶ್ವೋ ಭ್ರಾತೃಭಿಃ ಸಾರ್ಧಂ ಗತಿಂ ವೀರ ಯಥಾ ಕುರು ॥ ೯೨ ॥

॥ ವ್ಯಾಸ ಉವಾಚ ॥

ಇತ್ಯುಕ್ತೋ ಧರ್ಮರಾಜಂ ತು ಸಮಭ್ಯೇತ್ಯ ತಥೋಕ್ತವಾನ್ ।
ದೃಷ್ಟಂ ಚೈವಾನುಭೂತಂ ವಾ ಕಥಿತಂ ತದಶೇಷತಃ ॥ ೯೩ ॥

---

೮೯. ಹುಟ್ಟಿದವನಿಗೆ ಸಾವೆಂಬುದು ಸಿದ್ಧವು. ಅದೇರೀತಿ ಉನ್ನತಿಯಿಂದ ಅವನತಿಯೂ ಸಿದ್ಧವೇ. ಅಗಲಿಕೆಗೆ ಕೊನೆಯಾದರೆ ಸಂಯೋಗವೆನಿವುದು. ಕೂಡಿಟ್ಟರೆ ಕೊನೆಗೆ ಅದು ವ್ಯಯವನ್ನು ಹೊಂದುವುದು ಸಹಜ.

೯೦. ಇದೆಲ್ಲವನ್ನೂ ತಿಳಿದು ಯಾರು ದುಃಖಪಡದೆಯೂ, ಹರ್ಷಿಸದೆಯೂ ಇರುವರೋ ಅಂತಹ ಜ್ಞಾನಿಗಳ ನಡೆವಳಿಕೆಯನ್ನೇ ಕಲಿಯುವವರು ಅವರಂತೆಯೇ ಸುಖದುಃಖಾದಿದ್ವಂದ್ವಾತೀತರಾಗುವರು.

೯೧. ಆದುದರಿಂದ, ಓ ಪುರುಷರ್ಷಭ, ನೀನಿದೆಲ್ಲವನ್ನೂ ಅರಿತು, ನಿನ್ನ ಸಹೋದರರೊಂದಿಗೆ ರಾಜ್ಯವೆಲ್ಲವನ್ನೂ ತೊರೆದು ತಪಸ್ಸಿಗಾಗಿ ಅರಣ್ಯಕ್ಕೆ ತೆರಳುವವನಾಗು.

೯೨. ಆದುದರಿಂದ, ಓ ವೀರ! ಹೊರಡು. ಧರ್ಮರಾಜನಿಗೆ ನನ್ನೀ ಮಾತನ್ನು ತಿಳಿಸು. ನಾಳಿದ್ದು ನಿನ್ನ ಸಹೋದರರೊಂದಿಗೆ ಸದ್ಗತಿಯನ್ನು ಹೊಂದುವಂತೆ ಪ್ರಯತ್ನಮಾಡು ಎಂದನು.

೯೩. ಎಲೈ ಮುನಿಗಳಿರಾ! ಈರೀತಿ ನಾನು ಹೇಳಲು ಅರ್ಜುನನು ಹೊರಟು ಧರ್ಮರಾಜನಿಗೆ ನಾನು ಹೇಳಿದುದೆಲ್ಲವನ್ನೂ ತಿಳಿಸಿದುದಲ್ಲದೆ, ತಾನು ಕಂಡು ಅನುಭವಿಸಿದ ವೃತ್ತಾಂತವೆಲ್ಲವನ್ನೂ ತಿಳಿಯಪಡಿಸಿದನು.

ವ್ಯಾಸವಾಕ್ಯಂ ಚ ತೇ ಸರ್ವೇ ಶ್ರುತ್ವಾರ್ಜುನಸಮೀರಿತಂ ।
ರಾಜ್ಯೇ ಪರೀಕ್ಷಿತಂ ಕೃತ್ವಾ ಯಯುಃ ಪಾಂಡುಸುತಾ ವನಂ　　॥ ೯೪ ॥

ಇತ್ಯೇವಂ ವೋ ಮುನಿಶ್ರೇಷ್ಠಾ ವಿಸ್ತರೇಣ ಮಯೋದಿತಂ ।
ಜಾತಸ್ಯ ಚ ಯದೋರ್ವಂಶೇ ವಾಸುದೇವಸ್ಯ ಚೇಷ್ಟಿತಂ　　॥ ೯೫ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ಶ್ರೀಕೃಷ್ಣಚರಿತಸಮಾಪ್ತಿಕಥನಂ
ನಾಮ ದ್ವಾದಶಾಧಿಕದ್ವಿಶತತಮೋಽಧ್ಯಾಯಃ

---

೯೪. ಈರೀತಿ ಅರ್ಜುನನು ತಿಳಿಸಿದ ವ್ಯಾಸಮಹರ್ಷಿಯ ಮಾತನ್ನು ಕೇಳಿ ಆ ಪಾಂಡುಪುತ್ರರು ತಮ್ಮ ರಾಜ್ಯದಲ್ಲಿ ಪರೀಕ್ಷಿದ್ರಾಜನಿಗೆ ಪಟ್ಟಗಟ್ಟಿ ಕಾಡಿಗೆ ಹೊರಟುಹೋದರು.

೯೫. ಎಲೈ ಮುನಿಗಳಿರಾ! ಯದುವಂಶದಲ್ಲಿ ಅವತರಿಸಿದ ಪರಮ ಪುರುಷನಾದ ವಾಸುದೇವನ ದಿವ್ಯ ಲೀಲೆಗಳನ್ನು ಈರೀತಿ ನಿಮಗೆ ವಿವರವಾಗಿ ತಿಳಿಸಿದೆನು ಎಂದನು.

ಇಲ್ಲಿಗೆ ಬ್ರಹ್ಮಪುರಾಣದಲ್ಲಿ ಶ್ರೀ ಕೃಷ್ಣಚರಿತ್ರೆಯಸಮಾಪ್ತಿ ಕಥನವೆಂಬ
ಇನ್ನೂರಹನ್ನೆರಡನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇ ನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ತ್ರಯೋದಶಾಧಿಕದ್ವಿಶತತಮೋಽಧ್ಯಾಯಃ

॥ ಮುನಯ ಊಚುಃ ॥

**ಅಹೋ ಕೃಷ್ಣಸ್ಯ ಮಾಹಾತ್ಮ್ಯಮದ್ಭುತಂ ಚಾತಿಮಾನುಷಂ ।**
**ರಾಮಸ್ಯ ಚ ಮುನಿಶ್ರೇಷ್ಠ ತ್ವಯೋಕ್ತಂ ಭುವಿ ದುರ್ಲಭಂ ॥ ೧ ॥**

**ನ ತೃಪ್ತಿಮಧಿಗಚ್ಛಾಮಃ ಶೃಣ್ವಂತೋ ಭಗವತ್ಕಥಾಂ ।**
**ತಸ್ಮಾದ್ಬ್ರೂಹಿ ಮಹಾಭಾಗ ಭೂಯೋ ದೇವಸ್ಯ ಚೇಷ್ಟಿತಂ ॥ ೨ ॥**

---

### ಇನ್ನೂರಹದಿಮೂರನೆಯ ಅಧ್ಯಾಯವು

೧. ಮುನಿಗಳು ವ್ಯಾಸನನ್ನು ಕುರಿತು ಇಂತೆಂದರು :—ಓ ಮುನಿಶ್ರೇಷ್ಠ! ಕೃಷ್ಣನ ಮಹಿಮೆಯನ್ನು ಏನೆಂದು ಹೇಳೋಣ! ಅದು ಮನುಷ್ಯರಿಗೆ ಅಸಾಧ್ಯವಾದುದು. ಅತ್ಯಾಶ್ಚರ್ಯಕರವಾದುದು. ಬಲರಾಮನ ಮಹಿಮೆಯು ಸಹ ಇದೇರೀತಿ ಭೂಲೋಕದಲ್ಲಿ ದುರ್ಲಭವಾದುದು. ಇದನ್ನು ನೀನು ತಿಳಿಸಿರುವೆ.

೨. ಆದರೆ ಭಗವಚ್ಚರಿತ್ರವನ್ನು ಕೇಳಿದಷ್ಟೂ ನಮಗೆ ತೃಪ್ತಿಯೇ ಉಂಟಾಗುತ್ತಿಲ್ಲ. ಆದುದರಿಂದ ಓ ಮಹಾನುಭಾವ! ಮತ್ತೆ ನಮಗೆ ಆ ಪರಮಾತ್ಮನ ಲೀಲೆಗಳನ್ನು ತಿಳಿಸು.

ಪ್ರಾದುರ್ಭಾವಃ ಪುರಾಣೇಷು ವಿಷ್ಣೋರಮಿತತೇಜಸಃ ।
ಸತಾಂ ಕಥಯತಾಮೇವ ವರಾಹ ಇತಿ ನಃ ಶ್ರುತಂ ॥ ೩ ॥

ನ ಜಾನೀಮೋಽಸ್ಯ ಚರಿತಂ ನ ವಿಧಿಂ ನ ಚ ವಿಸ್ತರಂ ।
ನ ಕರ್ಮಗುಣಸದ್ಭಾವಂ ನ ಹೇತುತ್ವಮನೀಷಿತಂ ॥ ೪ ॥

ಕಿಮಾತ್ಮಕೋ ವರಾಹೋಽಸೌ ಕಾ ಮೂರ್ತಿಃ ಕಾ ಚ ದೇವತಾ ।
ಕಿಮಾಚಾರಪ್ರಭಾವೋ ವಾ ಕಿಂವಾ ತೇನ ತದಾ ಕೃತಂ ॥ ೫ ॥

ಯಜ್ಞಾರ್ಥೇ ಸಮವೇತಾನಾಂ ಮಿಷತಾಂ ಚ ದ್ವಿಜನ್ಮನಾಂ ।
ಮಹಾವರಾಹಚರಿತಂ ಸರ್ವಲೋಕಸುಖಾವಹಂ ॥ ೬ ॥

ಯಥಾ ನಾರಾಯಣೋ ಬ್ರಹ್ಮನ್ವಾರಾಹಂ ರೂಪಮಾಸ್ಥಿತಃ ।
ದಂಷ್ಟ್ರಯಾ ಗಾಂ ಸಮುದ್ರಸ್ಥಾಮುಜ್ಜಹಾರಾರಿಮರ್ದನಃ ॥ ೭ ॥

---

೩. ಅಪರಿಮಿತವಾದ ತೇಜಶ್ಶಾಲಿಯಾದ ಆ ವಿಷ್ಣುವು ವರಾಹರೂಪದಲ್ಲಿ ಅವತರಿಸಿದನೆಂದು ಪುರಾಣ ಸಂದರ್ಭಗಳಲ್ಲಿ ಸಾಧುಗಳು ಹೇಳುತ್ತಿರುವುದನ್ನು ನಾವು ಕೇಳಿರುವೆವು.

೪. ಇದರ ಚರಿತವನ್ನು ವಿಧಾನವನ್ನೂ ವಿವರಣೆಯನ್ನೂ ಗುಣ ಕರ್ಮಗಳ ಬಗೆಯನ್ನೂ ಕಾರಣವನ್ನೂ ನಾವು ತಿಳಿದಿಲ್ಲ.

೫. ಈ ವರಾಹವು ಯಾರು? ಯಾವ ಮೂರ್ತಿಯು? ಯಾವ ದೇವತೆಯು? ಇದರ ಆಚಾರವೇನು? ಮಹಿಮೆಯೇನು? ಆಗ ಇದು ಏನನ್ನು ಮಾಡಿತು?

೬. ಯಜ್ಞಸಮಯಗಳಲ್ಲಿ ನೋಡಲೂ ಮತ್ತು ಭಾಗವಹಿಸಲೂ ಬಂದಿರುವಂತಹ ಬ್ರಾಹ್ಮಣರಿಗೆ, ಆ ಸರ್ವಲೋಕಸುಖಪ್ರದವಾದ ಮಹಾ ವರಾಹ ಚರಿತವು ಬಹು ಇಷ್ಟವಾದುದು.

೭–೮. ಓ ಬ್ರಹ್ಮಜ್ಞ! ಆ ಪರಮಪುರುಷನು ವರಾಹರೂಪವನ್ನು ತಾಳಿ ಸಮುದ್ರದಲ್ಲಿ ಮುಳುಗಿಹೋಗಿದ್ದ ಭೂಮಿಯನ್ನು ತನ್ನ ಕೋರೆದಾಡೆ

ವಿಸ್ತರೇಣೈವ ಕರ್ಮಾಣಿ ಸರ್ವಾಣಿ ರಿಪುಘಾತಿನಃ ।
ಶ್ರೋತುಂ ನೋ ವರ್ತತೇ ಬುದ್ಧಿರ್ಹರೇಃ ಕೃಷ್ಣಸ್ಯ ಧೀಮತಃ ॥ ೮ ॥

ಕರ್ಮಣಾಮಾನುಪೂರ್ವ್ಯಾ ಚ ಪ್ರಾದುರ್ಭಾವಾಶ್ಚ ಯೇ ವಿಭೋ ।
ಯಾ ವಾಸ್ಯ ಪ್ರಕೃತಿರ್ಬ್ರಹ್ಮಂಸ್ತಾಶ್ಚಾಖ್ಯಾತುಂ ತ್ವಮರ್ಹಸಿ ॥ ೯ ॥

॥ ವ್ಯಾಸ ಉವಾಚ ॥

ಪ್ರಶ್ನಭಾರೋ ಮಹಾನೇಷ ಭವದ್ಭಿಃ ಸಮುದಾಹೃತಃ ।
ಯಥಾಶಕ್ತ್ಯಾ ತು ವಕ್ಷ್ಯಾಮಿ ಶ್ರೂಯತಾಂ ವೈಷ್ಣವಂ ಯಶಃ ॥ ೧೦ ॥

ವಿಷ್ಣೋಃ ಪ್ರಭಾವಶ್ರವಣೇ ದಿಷ್ಟ್ಯಾ ವೋ ಮತಿರುತ್ಥಿತಾ ।
ತಸ್ಮಾದ್ವಿಷ್ಣೋಃ ಸಮಸ್ತಾ ವೈ ಶೃಣುಧ್ವಂ ಯಾಃ ಪ್ರವೃತ್ತಯಃ ॥ ೧೧ ॥

ಸಹಸ್ರಾಸ್ಯಂ ಸಹಸ್ರಾಕ್ಷಂ ಸಹಸ್ರಚರಣಂ ಚ ಯಂ ।
ಸಹಸ್ರಶಿರಸಂ ದೇವಂ ಸಹಸ್ರಕರಮವ್ಯಯಂ ॥ ೧೨ ॥

---

ಯಿಂದ ಮೇಲಕ್ಕೆತ್ತಿದನೆಂದೂ ಶತ್ರುವನ್ನು ಸಂಹರಿಸಿದನೆಂದೂ ಕೇಳಿರುವೆವು. ಶತ್ರುಸಂಹಾರಿಯಾದ ಆ ಹರಿಯ ಎಲ್ಲ ಕೆಲಸಗಳನ್ನೂ ವಿಸ್ತಾರವಾಗಿ ಕೇಳಬೇಕೆಂದು ನಮಗೆ ಆಸೆಯಾಗಿರುವುದು.

೯. ಎಲೈ ಬ್ರಹ್ಮಜ್ಞಾನಿಯೇ! ಆ ಪರಮಾತ್ಮನು ಎಸಗಿದ ಕೆಲಸಗಳ ಕ್ರಮದಲ್ಲಿ ಅವನು ಮಾಡಿದ ಅವತಾರಗಳನ್ನೂ ಆತನ ಪ್ರಕೃತಿಯನ್ನೂ ನೀನು ನಮಗೆ ತಿಳಿಸಬೇಕು ಎನ್ನಲು,

೧೦. ಅವರನ್ನು ಕುರಿತು ವ್ಯಾಸಮಹರ್ಷಿಯು ಇಂತೆಂದನು ;—ನೀವು ಬಹುಭಾರಿ ಪ್ರಶ್ನೆಯನ್ನೇ ಕೇಳಿರುವಿರಿ. ಆದರೂ ನನಗೆ ಸಾಧ್ಯವಿದ್ದಷ್ಟು ಆ ವಿಷ್ಣುವಿನ ಪುಣ್ಯಚರಿತವನ್ನು ವಿವರಿಸುವೆನು.

೧೧. ವಿಷ್ಣುವಿನ ಮಹಿಮೆಯನ್ನು ಕೇಳಲು ನಿಮಗೆ ಬುದ್ಧಿಯುಂಟಾಗಿರುವುದು ಒಳ್ಳೆಯ ಪುಣ್ಯವೇ ಸರಿ. ಆದುದರಿಂದ ವಿಷ್ಣುವಿನ ಎಲ್ಲ ಪ್ರವರ್ತನೆಗಳನ್ನೂ (ನಡೆವಳಿಕೆ) ನಿಮಗೆ ತಿಳಿಸುವೆನು. ಕೇಳಿರಿ.

೧೨-೧೯. ಆ ವಿಷ್ಣುವನ್ನು ವೇದವಿತ್ತುಗಳಾದ ವಿಪ್ರರು ಈರೀತಿ ವರ್ಣಿಸುವರು ;—ಆತನಿಗೆ ಸಹಸ್ರ ಮುಖಗಳು, ಸಹಸ್ರ ನೇತ್ರಗಳು, ಸಹಸ್ರ ಪಾದ

ಸಹಸ್ರಜಿಹ್ವಂ ಭಾಸ್ವಂತಂ ಸಹಸ್ರಮುಕುಟಂ ಪ್ರಭುಂ ।
ಸಹಸ್ರದಂ ಸಹಸ್ರಾದಿಂ ಸಹಸ್ರಭುಜಮವ್ಯಯಂ ॥ ೧೩ ॥

ಹವನಂ ಸವನಂ ಚೈವ ಹೋತಾರಂ ಹವ್ಯಮೇವ ಚ ।
ಪಾತ್ರಾಣಿ ಚ ಪವಿತ್ರಾಣಿ ವೇದಿಂ ದೀಕ್ಷಾಂ ಸಮಿತ್ಸ್ರುವಂ ॥ ೧೪ ॥

ಸ್ರುಕ್ಸೋಮಸೂರ್ಯಮುಶಲಂ ಪ್ರೋಕ್ಷಣೀಂ ದಕ್ಷಿಣಾಯನಂ ।
ಅಧ್ವರ್ಯುಂ ಸಾಮಗಂ ವಿಪ್ರಂ ಸದಸ್ಯಂ ಸದನಂ ಸದಃ ॥ ೧೫ ॥

ಯೂಪಂ ಚಕ್ರಂ ಧ್ರುವಾಂ ದರ್ವೀಂ ಚರೂಂಶ್ಚೋಲೂಖಲಾನಿ ಚ ।
ಪ್ರಾಗ್ವಂಶಂ ಯಜ್ಞಭೂಮಿಂ ಚ ಹೋತಾರಂ ಚ ಪರಂ ಚ ಯತ್ ॥ ೧೬ ॥

ಹ್ರಸ್ವಾಣ್ಯತಿಪ್ರಮಾಣಾನಿ ಸ್ಥಾವರಾಣಿ ಚರಾಣಿ ಚ ।
ಪ್ರಾಯಶ್ಚಿತ್ತಾನಿ ವಾರ್ಘ್ಯಂ ಚ ಸ್ಥಂಡಿಲಾನಿ ಕುಶಾಸ್ತಥಾ ॥ ೧೭ ॥

ಮಂತ್ರಯಜ್ಞವಹಂ ವಹ್ನಿಂ ಭಾಗಂ ಭಾಗವಹಂ ಚ ಯತ್ ।
ಅಗ್ರಾಸಿನಂ ಸೋಮಭುಜಂ ಹುತಾರ್ಚಿಷಮುದಾಯುಧಂ ॥ ೧೮ ॥

---

ಗಳು, ಸಹಸ್ರ ಶಿರಸ್ಸುಗಳು, ಸಹಸ್ರ ಹಸ್ತಗಳು. ಆ ತೇಜಸ್ವಿಯಾದ ಪ್ರಭುವಿಗೆ ಸಾವಿರ ನಾಲಗೆಗಳು, ಸಾವಿರ ಕಿರೀಟಗಳು. ಆತನು ಸಾವಿರಗಟ್ಟಲೆ ಕೊಡುವನು. ಮತ್ತು ಸಾವಿರಾರು ವರ್ಷಗಳಕಾಲ ಮೊದಲನೆಯವನಾಗಿರುವನು. ಆ ನಾಶರಹಿತನಿಗೆ ಸಾವಿರ ತೋಳುಗಳು. ಆತನೇ ಹೋಮವು. ಆತನೇ ಯಜ್ಞವು. ಆತನೇ ಹೋತ್ರವು, ಹೋಮದ್ರವ್ಯವು. ಆತನೇ |ಯಜ್ಞಪಾತ್ರೆಗಳು. ಪವಿತ್ರಗಳು, ವೇದಿ, ದೀಕ್ಷೆ, ಸಮಿತ್ತು, ಸ್ರುವ, ಸ್ರುಕ್ಕು, ಸೂರ್ಯಚಂದ್ರರು, ಮುಸಲ, ಪ್ರೋಕ್ಷಣೀ, ದಕ್ಷಿಣಾಯನ, ಅಧ್ವರ್ಯು, ಉದ್ಗಾತೃ, ಬ್ರಾಹ್ಮಣ, ಸದಸ್ಯ, ಸದನ, ಸದಸ್ಸು ಇವೆಲ್ಲವೂ ಆತನಲ್ಲದೆ ಬೇರೆಯಲ್ಲವು. ಆದೇರೀತಿ, ಯೂಪವೂ, ಚಕ್ರವೂ, ಧ್ರುವ (ಸೃಗ್ವಿಶೇಷ)ವೂ, ದರ್ವಿಯೂ, ಉಲೂಖಲವೂ, ಪ್ರಾಗ್ವಂಶವೂ, ಯಜ್ಞಭೂಮಿಯೂ, ಇತರ ಹೋಮಮಾಡತಕ್ಕ ಋತ್ವಿಜರೂ, ಆ ಪರಮಪುರುಷನೇನೇ. ಹಾಗೆಯೇ ಅತಿ ಸಣ್ಣವಸ್ತುವೂ ದೊಡ್ಡವಸ್ತುವೂ, ಸ್ಥಾವರ ಜಂಗಮ ವಸ್ತುಗಳೂ, ಪ್ರಾಯಶ್ಚಿತ್ತವೂ, ಅರ್ಘ್ಯವೂ, ಸ್ಥಂಡಿಲಗಳೂ, ದರ್ಭೆಗಳೂ ಆ ದೇವೇಶ್ವರನಾದ ವಿಷ್ಣುವಲ್ಲದೆ ಬೇರೆಯಲ್ಲ.

ಆಹುರ್ವೇದವಿದೋ ವಿಪ್ರಾ ಯಂ ಯಜ್ಞೇ ಶಾಶ್ವತಂ ಪ್ರಭುಂ ।
ತಸ್ಯ ವಿಷ್ಣೋಃ ಸುರೇಶಸ್ಯ ಶ್ರೀವತ್ಸಾಂಕಸ್ಯ ಧೀಮತಃ ॥ ೧೯ ॥

ಪ್ರಾದುರ್ಭಾವಸಹಸ್ರಾಣಿ ಸಮತೀತಾನ್ಯನೇಕಶಃ ।
ಭೂಯಶ್ಚೈವ ಭವಿಷ್ಯಂತಿ ಹ್ಯೇವಮಾಹ ಪಿತಾಮಹಃ ॥ ೨೦ ॥

ಯತ್ಪೃಚ್ಛಧ್ವಂ ಮಹಾಭಾಗಾ ದಿವ್ಯಾಂ ಪುಣ್ಯಾಮಿಮಾಂ ಕಥಾಂ ।
ಪ್ರಾದುರ್ಭಾವಾಶ್ರಿತಾಂ ವಿಷ್ಣೋಃ ಸರ್ವಪಾಪಹರಾಂ ಶಿವಾಂ ॥ ೨೧ ॥

ಶೃಣುಧ್ವಂ ತಾಂ ಮಹಾಭಾಗಾಸ್ತದ್ಗತೇನಾಂತರಾತ್ಮನಾ ।
ಪ್ರವಕ್ಷ್ಯಾಮ್ಯಾನುಪೂರ್ವ್ಯೇಣ ಯತ್ಪೃಚ್ಛಧ್ವಂ ಮಮಾನಘಾಃ ॥ ೨೨ ॥

ವಾಸುದೇವಸ್ಯ ಮಹಾತ್ಮ್ಯಂ ಚರಿತಂ ಚ ಮಹಾಮತೇಃ ।
ಹಿತಾರ್ಥಂ ಸುರಮರ್ತ್ಯಾನಾಂ ಲೋಕಾನಾಂ ಪ್ರಭವಾಯ ಚ ॥ ೨೩ ॥

---

ಮತ್ತು ಮಂತ್ರಪೂರ್ವಕವಾದ ಯಜ್ಞಭಾಗವನ್ನು ಹೊರುವ ವಹ್ನಿಯೂ ಭಾಗವಾಹಿಯೂ, ಅಗ್ರಾಸಿಯೂ, ಸೋಮಪನೂ, ಹುತವಾದ ಜ್ವಾಲೆಯೂ, ಭಾರಿ ಆಯುಧಗಳೂ, ಈ ಮೇಲ್ಕಂಡ ಯಜ್ಞಭಾಗಗಳೆಲ್ಲವೂ, ಆ ಶಾಶ್ವತನೂ, ಶ್ರೀವತ್ಸಾಂಕನೂ, ಪ್ರಭುವೂ ಆದ ವಿಷ್ಣುವೇ ಅಲ್ಲದೆ ಮತ್ತೆ ಬೇರೆಯಲ್ಲ.

೨೦. ಈರೀತಿಯಾಗಿ ವೇದವಿತ್ತುಗಳಿಂದ ಯಜ್ಞಮಯನಾಗಿ ಕೀರ್ತಿಸಲ್ಪಡುವ ಆ ವಿಷ್ಣುವಿಗೆ ಸಾವಿರಾರು ಅವತಾರಗಳು ಕಳೆದುಹೋಗಿರುವುವು. ಇನ್ನುಮುಂದೆಯೂ ಅನೇಕ ಅವತಾರಗಳು ನಡೆಯುವುವು ಎಂದು ಬ್ರಹ್ಮನು ಹೇಳಿರುವನು.

೨೧-೨೨. ಎಲೈ ಭಾಗ್ಯಶಾಲಿಗಳಿರಾ! ಆ ವಿಷ್ಣುವಿನ ಅವತಾರಗಳನ್ನೊಳಗೊಂಡ ದಿವ್ಯವೂ, ಪುಣ್ಯದಾಯಕವೂ, ಸಕಲ ಪಾಪಪರಿಹಾರಕವೂ, ಮಂಗಲಕರವೂ ಆದ ಚರಿತ್ರವನ್ನು ಕೇಳುತ್ತಿದೀರಿ. ಅಲ್ಲವೇ? ಎಲೈ ಪುಣ್ಯಾತ್ಮರಿರಾ! ಕೇಳಿರಿ. ಆ ಪರಮಾತ್ಮನಲ್ಲಿಯೇ ನಿಮ್ಮ ಮನಸ್ಸನ್ನು ನೆಲೆಗೊಳಿಸಿ ಕೇಳಿರಿ. ನೀವು ಕೇಳಿದುದೆಲ್ಲವನ್ನೂ ಕ್ರಮವಾಗಿ ವಿವರಿಸುವೆನು.

೨೩-೨೪. ಮಹಾಜ್ಞಾನಿಯಾದ ವಾಸುದೇವನ ಮಾಹಾತ್ಮ್ಯವನ್ನೂ ಚರಿತ್ರವನ್ನೂ ಆಲಿಸಿರಿ. ಸಕಲ ಜೀವಿಗಳಲ್ಲಿ ನೆಲೆಸಿರುವವನೂ, ಮಹಾವೀರ್ಯಶಾಲಿಯೂ ಆದ ಆ ಪ್ರಭುವು ದೇವತೆಗಳ ಮತ್ತು ಮಾನವರ

ಬಹುಶಃ ಸರ್ವಭೂತಾತ್ಮಾ ಪ್ರಾದುರ್ಭವತಿ ವೀರ್ಯವಾನ್ ।
ಪ್ರಾದುರ್ಭಾವಾಂಶ್ಚ ವಕ್ಷ್ಯಾಮಿ ಪುಣ್ಯಾನ್ದಿವ್ಯಾನ್ಗುಣಾನ್ವಿತಾನ್ ॥ ೨೪ ॥

ಸುಪ್ತ್ವಾ ಯುಗಸಹಸ್ರಂ ಯಃ ಪ್ರಾದುರ್ಭವತಿ ಕಾರ್ಯತಃ ।
ಪೂರ್ಣೇ ಯುಗಸಹಸ್ರೇಽಥ ದೇವದೇವೋ ಜಗತ್ಪತಿಃ ॥ ೨೫ ॥

ಬ್ರಹ್ಮಾ ಚ ಕಪಿಲಶ್ಚೈವ ತ್ರ್ಯಂಬಕಸ್ತ್ರಿದಶಾಸ್ತಥಾ ।
ದೇವಾಃ ಸಪ್ತರ್ಷಯಶ್ಚೈವ ನಾಗಾಶ್ಚಾಪ್ಸರಸಸ್ತಥಾ ॥ ೨೬ ॥

ಸನತ್ಕುಮಾರಶ್ಚ ಮಹಾನುಭಾವೋ
ಮನುರ್ಮಹಾತ್ಮಾ ಭಗವಾನ್ಪ್ರಜಾಕರಃ ।
ಪುರಾಣದೇವೋಽಥ ಪುರಾಣಿ ಚಕ್ರೇ
ಪ್ರದೀಪ್ತವೈಶ್ವಾನರತುಲ್ಯತೇಜಾಃ ॥ ೨೭ ॥

ಯೋಽಸೌ ಚಾರ್ಣವಮಧ್ಯಸ್ಥೋ ನಷ್ಟೇ ಸ್ಥಾವರಜಂಗಮೇ ।
ನಷ್ಟೇ ದೇವಾಸುರನರೇ ಪ್ರನಷ್ಟೋರಗರಾಕ್ಷಸೇ ॥ ೨೮ ॥

---

ಕ್ಷೇಮಕ್ಕೂ, ಲೋಕಗಳ ಉದ್ಧಾರಕ್ಕಾಗಿಯೂ ಸಾಮಾನ್ಯವಾಗಿ ಅವತಾರವೆತ್ತುವನು. ದಿವ್ಯವಾದ ಕಲ್ಯಾಣಗುಣಗಳಿಂದ ತುಂಬಿರುವ ಆತನ ಅವತಾರಗಳನ್ನು ವಿವರಿಸಿ ಹೇಳುವೆನು.

೨೫. ದೇವದೇವನಾದ ಆ ಜಗದೀಶನು ಒಂದು ಸಹಸ್ರ ಯುಗಗಳ ಕಾಲ ಯೋಗನಿದ್ರೆಯಲ್ಲಿರುವನು. ಆ ಕಾಲವು ಮುಗಿದನಂತರ ಕಾರ್ಯವಶಾತ್ ಅವತಾರಮಾಡುವನು.

೨೬-೨೭. ಬ್ರಹ್ಮನೂ, ಕಪಿಲನೂ, ಈಶ್ವರನೂ, ದೇವತೆಗಳೂ, ಸಪ್ತರ್ಷಿಗಳೂ, ನಾಗರೂ, ಅಪ್ಸರಸ್ತ್ರೀಯರೂ, ಮಹಾನುಭಾವನಾದ ಸನತ್ಕುಮಾರನೂ, ಪ್ರಜಾವರ್ಗಕ್ಕೆ ಮೂಲಪುರುಷನಾದ ಸ್ವಾಯಂಭುವಮನುವೂ ಇವರೆಲ್ಲರಿಗೂ, ಜ್ವಲಿಸುತ್ತಿರುವ ಅಗ್ನಿಗೆಣೆಯಾದ ತೇಜಸ್ಸುಳ್ಳ ಆ ಪರಮಪುರುಷನು ಪುರಗಳನ್ನು ಸೃಷ್ಟಿಸಿದನು.

೨೮-೨೯. ಹಿಂದೆ ಪ್ರಳಯಕಾಲದಲ್ಲಿ, ಚರಾಚರವಸ್ತುಗಳೂ, ದೇವತೆಗಳೂ, ಮನುಷ್ಯರೂ, ಅಸುರರೂ, ಪನ್ನಗರೂ, ರಾಕ್ಷಸರೂ ಎಲ್ಲರೂ ನಾಶ

ಯೋದ್ಧುಕಾಮೌ ದುರಾಧರ್ಷೌ ತಾವುಭೌ ಮಧುಕೈಟಭೌ ।
ಹತೌ ಭಗವತಾ ತೇನ ತಯೋರ್ದತ್ತ್ವಾಪ್ಸಿತಂ ವರಂ ॥ ೨೯ ॥

ಪುರಾ ಕಮಲನಾಭಸ್ಯ ಸ್ವಪತಃ ಸಾಗರಾಂಭಸಿ ।
ಪುಷ್ಕರೇ ತತ್ರ ಸಂಭೂತಾ ದೇವಾಃ ಸರ್ಷಿಗಣಾಸ್ತಥಾ ॥ ೩೦ ॥

ಏಷ ಪೌಷ್ಕರಕೋ ನಾಮ ಪ್ರಾದುರ್ಭಾವೋ ಮಹಾತ್ಮನಃ ।
ಪುರಾಣಂ ಕಥ್ಯತೇ ಯತ್ರ ದೇವಶ್ರುತಿಸಮಾಹಿತಂ ॥ ೩೧ ॥

ವಾರಾಹಸ್ತು ಶ್ರುತಿಮುಖಃ ಪ್ರಾದುರ್ಭಾವೋ ಮಹಾತ್ಮನಃ ।
ಯತ್ರ ವಿಷ್ಣುಃ ಸುರಶ್ರೇಷ್ಠೋ ವಾರಾಹಂ ರೂಪಮಾಸ್ಥಿತಃ ॥ ೩೨ ॥

ವೇದಪಾದೋ ಯೂಪದಂಷ್ಟ್ರಃ ಕ್ರತುದಂತಶ್ಚಿತೀಮುಖಃ ।
ಅಗ್ನಿಜಿಹ್ವೋ ದರ್ಭರೋಮಾ ಬ್ರಹ್ಮಶೀರ್ಷೋ ಮಹಾತಪಾಃ ॥ ೩೩ ॥

---

ವಾದಾಗ, ತಾನೇ ತಾನಾಗಿ ಸಮುದ್ರದ ಮಧ್ಯದಲ್ಲಿ ಮಲಗಿದ್ದ ಆ ಭಗವಂತನು, ವರಬಲಗರ್ವಿತರಾಗಿ ಯಾರಿಗೂ ಸಗ್ಗದಂತಹ, ಯುದ್ಧಾಪೇಕ್ಷಿಗಳಾದ ಮಧುಕೈಟಭರೆಂಬ ದಾನವರನ್ನು ಸಂಹರಿಸಿದನು.

೩೦. ಆ ಕಮಲನಾಭನು (ವಿಷ್ಣುವು) ಹಿಂದೆ ಸಮುದ್ರದ ನೀರಿನಮೇಲೆ ಮಲಗಿದ್ದಾಗ ಪುಷ್ಕರವೆಂಬ ಪ್ರದೇಶದಲ್ಲಿ ದೇವತೆಗಳೂ ಋಷಿಗಳೂ ಆವಿರ್ಭವಿಸಿದರು.

೩೧. ಇದನ್ನೇ ಆ ಮಹಾಪುರುಷನ ಪೌಷ್ಕರಕವೆಂಬ ಅವತಾರವೆಂದು ಹೇಳುವರು. ಆ ಸ್ಥಳದಲ್ಲಿ ದೇವತೆಗಳೆಲ್ಲರೂ ಶ್ರವಣಮಾಡುವಂತೆ ಪುರಾಣವು ಹೇಳಲ್ಪಡುವುದು. ಅನಂತರ ಆ ಮಹಾತ್ಮನ ವರಾಹವೆಂಬ ಅವತಾರವಾಯಿತು. ಅಲ್ಲಿ ಸುರಶ್ರೇಷ್ಠನಾದ ವಿಷ್ಣುವು ವರಾಹದಂತೆ ರೂಪವನ್ನು ತಾಳಿದನು.

೩೨-೩೩. ಆ ವರಾಹಕ್ಕೆ ವೇದಗಳೇ ಕಾಲುಗಳು. ಯೂಪಸ್ತಂಭವೇ ದಾಡೆಗಳು. ಯಜ್ಞಗಳೇ ಹಲ್ಲುಗಳು. ಚಿತಿಯೇ (ಗರುಡ ಮೊದಲಾದ ಆಕಾರಗಳಲ್ಲಿ ವೇದಿಕಾರಚನೆಯನ್ನು ಚಿತಿಯೆನ್ನುವರು) ಮುಖವು. ಅಗ್ನಿಯೇ ನಾಲಗೆಯು. ದರ್ಭೆಗಳೇ ರೋಮಗಳು. ಬ್ರಹ್ಮನೇ ಅದರ ತಲೆಯು.

ಅಹೋರಾತ್ರೇಕ್ಷಣೋ ದಿವ್ಯೋ ವೇದಾಂಗಃ ಶ್ರುತಿಭೂಷಣಃ ।
ಆಜ್ಯನಾಸಃ ಸ್ರುವತುಂಡಃ ಸಾಮಘೋಷಸ್ವರೋ ಮಹಾನ್ ॥ ೩೪ ॥

ಸತ್ಯಧರ್ಮಮಯಃ ಶ್ರೀಮಾನ್ಕ್ರಮವಿಕ್ರಮಸತ್ಕೃತಃ ।
ಪ್ರಾಯಶ್ಚಿತ್ತನಖೋ ಘೋರಃ ಪಶುಜಾನುರ್ಮುಖಾಕೃತಿಃ ॥ ೩೫ ॥

ಉದ್ಗಾತಾಂತ್ರೋ ಹೋಮಲಿಂಗೋ ಬೀಜೌಷಧಿಮಹಾಫಲಃ ।
ವಾದ್ಯಂತರಾತ್ಮಾ ಮಂತ್ರಸ್ಫಿಗ್ವಿಕೃತಃ ಸೋಮಶೋಣಿತಃ ॥ ೩೬ ॥

ವೇದಿಸ್ಕಂಧೋ ಹವಿರ್ಗಂಧೋ ಹವ್ಯಕವ್ಯಾತಿವೇಗವಾನ್ ।
ಪ್ರಾಗ್ವಂಶಕಾಯೋ ದ್ಯುತಿಮಾನ್ನಾನಾದೀಕ್ಷಾಭಿರನ್ವಿತಃ ॥ ೩೭ ॥

ದಕ್ಷಿಣಾಹೃದಯೋ ಯೋಗೀ ಮಹಾಸತ್ರಮಯೋ ಮಹಾನ್ ।
ಉಪಾಕರ್ಮಾಷ್ಟರುಚಕಃ ಪ್ರವರ್ಗಾವರ್ತಭೂಷಣಃ ॥ ೩೮ ॥

---

೩೪. ಆ ವರಾಹದ ಕಣ್ಣುಗಳೇ ಹಗಲು ರಾತ್ರಿಗಳು, ವೇದಗಳೇ ಅದರ ಅಂಗಗಳು. ವೇದವೇ ಅದಕ್ಕೆ ಒಡವೆಯು. ಅದರ ನಾಸಿಕವು ಆಜ್ಯವಾಗಿಯೂ, ಬಾಯಿ ಸ್ರುವವಾಗಿಯೂ, ಸ್ವರವು ಸಾಮಘೋಷವಾಗಿಯೂ ಇರುವುದು.

೩೫. ಸತ್ಯ ಮತ್ತು ಧರ್ಮಗಳೇ ಅದರ ಕ್ರಮ ವಿಕ್ರಮಗಳು (ಚಲನ ವಲನಗಳು) ಪ್ರಾಯಶ್ಚಿತ್ತವೇ ಅದರ ಉಗುರುಗಳು. ಪಶುಗಳೇ ಅದರ ಮಂಡಿಯು.

೩೬. ಉದ್ಗಾತವೇ ಅದರ ನರಗಳು. ಹೋಮವೇ ಅದರ ಲಿಂಗವು. ಓಷಧಿ ಮತ್ತು ಫಲಗಳೇ ಅದರ ಬೀಜಗಳು. ವಾದಿಯೇ ಅದರ ಅಂತರಾತ್ಮವು. ಮಂತ್ರವೇ ಅದರ ವಿಕೃತವಾದ ಕಟಿಪಶ್ಚಾದ್ಭಾಗವು.

೩೭. ಮತ್ತು ವೇದಿಯು ಅದರ ಹೆಗಲು. ಹವಿಸ್ಸೇ ಅದರ ವಾಸನೆಯು. ಹವ್ಯ ಕವ್ಯಗಳೇ ಅದರ ವೇಗವು. ಪ್ರಾಗ್ವಂಶವೇ ಅದರ ದೇಹವು. ನಾನಾದೀಕ್ಷೆಗಳೇ ಅದಸ ಕಾಂತಿಯು.

೩೮-೩೯. ದಕ್ಷಿಣೆಯೇ ಅದರ ಹೃದಯವು. ಉಪಾಕರ್ಮವೇ ಅದರ ಎಂಟು ರುಚಕಗಳು. ಪ್ರವರ್ಗಗಳೇ ಅದರ ಸುಳಿಗಳು. ಬಗೆಬಗೆಯಾದ ಛಂದಸ್ಸುಗಳೇ ಅದರ ಗಮನರೀತಿಗಳು. ಗೂಢವಾದ ಉಪನಿಷತ್ತುಗಳು

ನಾನಾಚ್ಛಂದೋಗತಿಪಥೋ ಗುಹ್ಯೋಪನಿಷದಾಸನಃ ।
ಛಾಯಾಪತ್ನೀಸಹಾಯೋಽಸೌ ಮಣಿಶೃಂಗ ಇವೋತ್ಥಿತಃ ॥ ೩೯ ॥

ಮಹೀಂ ಸಾಗರಪರ್ಯಂತಾಂ ಸಶೈಲವನಕಾನನಾಂ ।
ಏಕಾರ್ಣವಜಲಭ್ರಷ್ಟಾಮೇಕಾರ್ಣವಗತಃ ಪ್ರಭುಃ ॥ ೪೦ ॥

ದಂಷ್ಟ್ರಯಾ ಯಃ ಸಮುದ್ಧೃತ್ಯ ಲೋಕಾನಾಂ ಹಿತಕಾಮ್ಯಯಾ ।
ಸಹಸ್ರಶೀರ್ಷೋ ಲೋಕಾದಿಶ್ಚಕಾರ ಜಗತೀಂ ಪುನಃ ॥ ೪೧ ॥

ಏವಂ ಯಜ್ಞವರಾಹೇಣ ಭೂತ್ವಾ ಭೂತಹಿತಾರ್ಥಿನಾ ।
ಉದ್ಧೃತಾ ಪೃಥಿವೀ ದೇವೀ ಸಾಗರಾಂಬುಧರಾ ಪುರಾ ॥ ೪೨ ॥

ವಾರಾಹ ಏಷ ಕಥಿತೋ ನಾರಸಿಂಹಸ್ತತೋ ದ್ವಿಜಾಃ ।
ಯತ್ರ ಭೂತ್ವಾ ಮೃಗೇಂದ್ರೇಣ ಹಿರಣ್ಯಕಶಿಪುರ್ಹತಃ ॥ ೪೩ ॥

---

ಅದರ ಆಸನ ಪ್ರದೇಶವು. ಪತ್ನಿಯೇ ಅದರ ನೆರಳು. ಈರೀತಿಯಾಗಿ ಮಹಾಯಾಗಸ್ವರೂಪವಾದ ಯಜ್ಞವರಾಹವು ಮಣಿಮಯವಾದ ಪರ್ವತಶೃಂಗದಂತೆ ಮೇಲೆದ್ದು ಕಾಣಿಸಿಕೊಂಡಿತು.

೪೦–೪೧. ನೀರೇ ನೀರಾಗಿದ್ದ ಆ ಪ್ರಳಯ ಸಮಯದಲ್ಲಿ ಪ್ರಜೆಗಳ ಕ್ಷೇಮಕ್ಕೋಸ್ಕರವಾಗಿ ಸಹಸ್ರ ಶೀರ್ಷಗಳುಳ್ಳವನೂ, ಲೋಕಕಾರಣನೂ ಆದ ಪ್ರಭುವು, ಸಾಗರತಲದಲ್ಲಿ ಮುಳುಗಿಹೋಗುತ್ತಿದ್ದ, ಸಮುದ್ರವೇ ಮೇರೆಯಾಗುಳ್ಳ ಮತ್ತು ಬೆಟ್ಟಗಳೂ ಕಾಡುಗಳೂ ಇವುಗಳಿಂದ ತುಂಬಿರುವ ಭೂಮಿಯನ್ನು ಕೋರೆದಾಡೆಯಿಂದ ಮೇಲಕ್ಕೆ ಎತ್ತಿದನು.

೪೨. ಈರೀತಿಯಾಗಿ ಹಿಂದೆ ಸಮುದ್ರವಸನೆಯಾದ ಭೂದೇವಿಯನ್ನು, ಸಕಲ ಭೂತಗಳ ಕ್ಷೇಮಾರ್ಥವಾಗಿ ಆ ಪರಮಪುರುಷನು ಯಜ್ಞವರಾಹರೂಪವನ್ನು ತಾಳಿ ಉದ್ಧಾರಮಾಡಿದನು.

೪೩. ಎಲೈ ಬ್ರಾಹ್ಮಣರಿರಾ! ನಿಮಗೆ ವರಾಹಾವತಾರವನ್ನು ತಿಳಿಸಿದೆನು. ಬಳಿಕ ನರಸಿಂಹಾವತಾರವು. ಈ ಅವತಾರದಲ್ಲಿಯೇ ಶ್ರೀಹರಿಯು ಸಿಂಹಾಕೃತಿಯನ್ನು ತಾಳಿ ಹಿರಣ್ಯಕಶಿಪುವನ್ನು ಸಂಹಾರಮಾಡಿದನು.

ಪುರಾ ಕೃತಯುಗೇ ನಾಮ ಸುರಾರಿರ್ಬಲದರ್ಪಿತಃ ।
ದೈತ್ಯಾನಾಮಾದಿಪುರುಷಶ್ಚಕಾರ ಸುಮಹತ್ತಪಃ ॥ ೪೪ ॥

ದಶ ವರ್ಷಸಹಸ್ರಾಣಿ ಶತಾನಿ ದಶ ಪಂಚ ಚ ।
ಜಪೋಪವಾಸನಿರತಸ್ತಸ್ಥೌ ಮೌನವ್ರತಸ್ಥಿತಃ ॥ ೪೫ ॥

ತತಃ ಶಮದಮಾಭ್ಯಾಂ ಚ ಬ್ರಹ್ಮಚರ್ಯೇಣ ಚೈವ ಹಿ ।
ಪ್ರೀತೋಽಭವತ್ತತಸ್ತಸ್ಯ ತಪಸಾ ನಿಯಮೇನ ಚ ॥ ೪೬ ॥

ತಂ ವೈ ಸ್ವಯಂಭೂರ್ಭಗವಾನ್ಸ್ವಯಮಾಗಮ್ಯ ಭೋ ದ್ವಿಜಾಃ ।
ವಿಮಾನೇನಾರ್ಕವರ್ಣೇನ ಹಂಸಯುಕ್ತೇನ ಭಾಸ್ವತಾ ॥ ೪೭ ॥

ಆದಿತ್ಯೈರ್ವಸುಭಿಃ ಸಾರ್ಧಂ ಮರುದ್ಭಿರ್ದೈವತೈಸ್ತಥಾ ।
ರುದ್ರೈರ್ವಿಶ್ವಸಹಾಯೈಶ್ಚ ಯಕ್ಷರಾಕ್ಷಸಕಿಂನರೈಃ ॥ ೪೮ ॥

---

೪೪–೪೫. ಹಿಂದೆ ಕೃತಯುಗದಲ್ಲಿ ದೇವವೈರಿಯೂ, ದೈತ್ಯರಿಗೆಲ್ಲಾ ಮೂಲಪುರುಷನೂ ಆದ ಹಿರಣ್ಯಕಶಿಪುವು ತನ್ನ ಬಲದಿಂದ ದರ್ಪವನ್ನು ತಾಳಿ, ಹನ್ನೊಂದುಸಾವಿರದೈನೂರು ವರ್ಷಗಳ ಕಾಲ ಮೌನವನ್ನು ವಹಿಸಿ, ಜಪ ಮತ್ತು ಉಪವಾಸಗಳಲ್ಲಿ ನಿರತನಾಗಿ ಭಾರಿಯಾದ ತಪಸ್ಸನ್ನು ಮಾಡಿದನು.

೪೬. ಆ ಹಿರಣ್ಯಕಶಿಪುವಿನ ಶಮೆಗೂ, ದಮೆಗೂ, ಬ್ರಹ್ಮಚರ್ಯಕ್ಕೂ, ತಪಸ್ಸಿಗೂ, ನಿಷ್ಠೆಗೂ, ಬ್ರಹ್ಮನು ಸುಪ್ರೀತನಾದನು.

೪೭-೫೧. ಆಗ ಚರಾಚರಗಳಿಗೆಲ್ಲಾ ಪ್ರಭುವೂ, ಬ್ರಹ್ಮಜ್ಞಾನಿಗಳಲ್ಲೆಲ್ಲಾ ಮೇಲಾದವನೂ, ಆದ ಭಗವಂತನಾದ ಚತುರ್ಮುಖಬ್ರಹ್ಮನು, ಸೂರ್ಯನಂತೆ ಆರಕ್ತವಾದ ವರ್ಣದಿಂದ ಕಂಗೊಳಿಸುತ್ತಿರುವ ಹಂಸಗಳಿಂದೆಳೆಯಲ್ಪಡುವ ವಿಮಾನವನ್ನೇರಿ ತಾನಾಗಿಯೇ ಬಂದನು. ಆ ಬ್ರಹ್ಮನನ್ನು ದ್ವಾದಶಾದಿತ್ಯರೂ, ಅಷ್ಟವಸುಗಳೂ, ಸಪ್ತಮರುತ್ತುಗಳೂ, ಏಕಾದಶರುದ್ರರೂ, ತ್ರಯೋದಶವಿಶ್ವೇದೇವತೆಗಳೂ, ಇನ್ನೂ ಇತರ ದೇವತೆಗಳೂ, ಯಕ್ಷರೂ, ರಾಕ್ಷಸರೂ, ಕಿನ್ನರರೂ, ದಿಕ್ಕು ವಿದಿಕ್ಕುಗಳೂ, ನದಿಗಳೂ, ಸಾಗರಗಳೂ,

ದಿಶಾಭಿಃ ಪ್ರದಿಶಾಭಿಶ್ಚ ನದೀಭಿಃ ಸಾಗರೈಸ್ತಥಾ ।
ನಕ್ಷತ್ರೈಶ್ಚ ಮುಹೂರ್ತೈಶ್ಚ ಖೇಚರೈಶ್ಚ ಮಹಾಗ್ರಹೈಃ ॥ ೪೯ ॥

ದೇವರ್ಷಿಭಿಸ್ತಪೋವೃದ್ಧೈಃ ಸಿದ್ಧೈರ್ವಿದ್ವದ್ಭಿರೇವ ಚ ।
ರಾಜರ್ಷಿಭಿಃ ಪುಣ್ಯತಮೈರ್ಗಂಧರ್ವೈರಪ್ಸರೋಗಣೈಃ ॥ ೫೦ ॥

ಚರಾಚರಗುರುಃ ಶ್ರೀಮಾನ್ವೃತಃ ಸರ್ವೈಃ ಸುರೈಸ್ತಥಾ ।
ಬ್ರಹ್ಮಾ ಬ್ರಹ್ಮವಿದಾಂ ಶ್ರೇಷ್ಠೋ ದೈತ್ಯಂ ವಚನಮಬ್ರವೀತ್ ॥ ೫೧ ॥

॥ ಬ್ರಹ್ಮೋವಾಚ ॥

ಪ್ರೀತೋಽಸ್ಮಿ ತವ ಭಕ್ತಸ್ಯ ತಪಸಾನೇನ ಸುವ್ರತ ।
ವರಂ ವರಯ ಭದ್ರಂ ತೇ ಯಥೇಷ್ಟಂ ಕಾಮಮಾಪ್ನುಹಿ ॥ ೫೨ ॥

॥ ಹಿರಣ್ಯಕಶಿಪುರುವಾಚ ॥

ನ ದೇವಾಸುರಗಂಧರ್ವಾ ನ ಯಕ್ಷೋರಗರಾಕ್ಷಸಾಃ ।
ಋಷಯೋ ವಾಥ ಮಾಂ ಶಾಪೈಃ ಕ್ರುದ್ಧಾ ಲೋಕಪಿತಾಮಹ ॥ ೫೩ ॥

---

ನಕ್ಷತ್ರಗಳೂ, ಮುಹೂರ್ತಗಳೂ, ಅಂತರಿಕ್ಷಚಾರಿಗಳಾದ ಮಹಾಗ್ರಹಗಳೂ, ತಪೋವೃದ್ಧರೆನಿಸಿದ ದೇವತೆಗಳೂ, ಋಷಿಗಳೂ, ಸಿದ್ಧರೂ, ಜ್ಞಾನಿಗಳೂ, ಪುಣ್ಯಾತ್ಮರಾದ ರಾಜರ್ಷಿಗಳೂ, ಗಂಧರ್ವರೂ, ಅಪ್ಸರಸ್ತ್ರೀಯರೂ ಹಿಂಬಾಲಿಸುತ್ತಾ ಜೊತೆಯಲ್ಲಿಯೇ ಬಂದರು.

೫೨. ಆಗ ಬ್ರಹ್ಮನು ಹಿರಿಣ್ಯಕಶಿಪುವನ್ನು ಕುರಿತು, "ಎಲೈ ಸುವ್ರತನೇ, ನೀನು ಭಕ್ತಿಯಿಂದ ಮಾಡಿದ ತಪಸ್ಸಿಗೆ ಮೆಚ್ಚಿದೆನು. ನಿನಗೆ ಮಂಗಳವಾಗಲಿ. ಬೇಕಾದ ವರವನ್ನು ಕೇಳು" ಎನ್ನಲು

೫೩–೫೫. ಹಿರಣ್ಯಕಶಿಪುವು ಇಂತೆಂದನು. ಓ ಪಿತಾಮಹಾ! ದೇವತೆಗಳಾಗಲೀ, ಅಸುರರಾಗಲೀ, ಗಂಧರ್ವರಾಗಲೀ, ಋಷಿಗಳಾಗಲಿ ತಮ್ಮ ತಪೋಬಲದಿಂದ ನನ್ನನ್ನು ಶಪಿಸದೆ ಇರಲಿ. ನನಗೆ ಆಯುಧದಿಂದಾಗಲೀ,

ಶಪೇಯುಸ್ತಪಸಾ ಯುಕ್ತಾ ವರ ಏವ ವೃತೋ ಮಯಾ ।
ನ ಶಸ್ತ್ರೇಣ ನ ವಾಸ್ತ್ರೇಣ ಗಿರಿಣಾ ಪಾದಪೇನ ವಾ ॥ ೫೪ ॥

ನ ಶುಷ್ಕೇಣ ನ ಚಾರ್ದ್ರೇಣ ನ ಚೈವೋರ್ಧ್ವಂ ನ ಚಾಪ್ಯಧಃ ।
ಪಾಣಿಪ್ರಹಾರೇಣೈಕೇನ ಸ ಭೃತ್ಯಬಲವಾಹನಂ ॥ ೫೫ ॥

ಯೋ ಮಾಂ ನಾಶಯಿತುಂ ಶಕ್ತಃ ಸ ಮೇ ಮೃತ್ಯುರ್ಭವಿಷ್ಯತಿ ।
ಭವೇಯಮಹಮೇವಾರ್ಕಃ ಸೋಮೋ ವಾಯುರ್ಹುತಾಶನಃ ॥ ೫೬ ॥

ಸಲಿಲಂ ಚಾಂತರಿಕ್ಷಂ ಚ ಆಕಾಶಂ ಚೈವ ಸರ್ವಶಃ ।
ಅಹಂ ಕ್ರೋಧಶ್ಚ ಕಾಮಶ್ಚ ವರುಣೋ ವಾಸವೋ ಯಮಃ ।
ಧನದಶ್ಚ ಧನಾಧ್ಯಕ್ಷೋ ಯಕ್ಷಃ ಕಿಂಪುರುಷಾಧಿಪಃ ॥ ೫೭ ॥

॥ ಬ್ರಹ್ಮೋವಾಚ ॥

ಏತೇ ದಿವ್ಯಾ ವರಾಸ್ತಾತ ಮಯಾ ದತ್ತಾಸ್ತವಾದ್ಭುತಾಃ ।
ಸರ್ವಾನ್ಕಾಮಾನಿಮಾಂಸ್ತಾತ ಪ್ರಾಪ್ಸ್ಯಸಿ ತ್ವಂ ನ ಸಂಶಯಃ ॥ ೫೮ ॥

---

ಅಸ್ತ್ರಗಳಿಂದಾಗಲೀ, ಬೆಟ್ಟದಿಂದಾಗಲಿ, ಮರದಿಂದಾಗಲೀ, ಒಣಗಿರುವ ಅಥವಾ ಹಸಿಯಾಗಿರುವ ವಸ್ತುವಿನಿಂದಾಗಲೀ, ಮೇಲಾಗಲೀ, ಕೆಳಗಾಗಲೀ, ಸಾವು ಉಂಟಾಗದಿರಲಿ. ಇದೇ ನಾನು ಬೇಡುವ ವರವು.

೫೬. ಯಾವ ಪುರುಷನು, ಭೃತ್ಯರಿಂದಲೂ, ಸೇನೆಗಳಿಂದಲೂ, ವಾಹನಗಳಿಂದಲೂ, ಕೂಡಿದ್ದರೂ ಸಹ ತನ್ನ ಒಂದೇ ಒಂದು ಪಾಣಿಪ್ರಹಾರದಿಂದ ನನ್ನನ್ನು ನಾಶಮಾಡಬಲ್ಲನೋ ಅವನು ಮಾತ್ರವೇ ನನಗೆ ಮೃತ್ಯುವಾಗುವನು.

೫೭. ನಾನೇ, ಸೂರ್ಯಚಂದ್ರರೂ, ಅಗ್ನಿಯೂ, ವಾಯುವೂ, ನೀರೂ, ಆಕಾಶವೂ, ದ್ಯುಲೋಕವೂ, ಕಾಮವೂ, ಕ್ರೋಧವೂ, ವರುಣನೂ, ಇಂದ್ರನೂ, ಯಮನೂ, ಧನಾಧಿಪತಿಯಾದ ಕುಬೇರನೂ, ಯಕ್ಷನೂ, ಕಿಂಪುರುಷಾಧಿಪತಿಯೂ ಎಲ್ಲವೂ ನಾನೇ ಆಗಬೇಕು ಎಂದು ಪ್ರಾರ್ಥಿಸಲು,

೫೮. ಬ್ರಹ್ಮನು ಅವನನ್ನು ಕುರಿತು 'ಅಪ್ಪಾ! ನೀನು ಕೇಳಿದ ಈ ಅದ್ಭುತವಾದ ವರಗಳೆಲ್ಲವನ್ನೂ ನಾನು ಇತ್ತಿರುವೆನು. ಈ ಎಲ್ಲ ವರಗಳನ್ನೂ ನೀನು ಖಂಡಿತವಾಗಿಯೂ ಹೊಂದುವೆ. ಇದರಲ್ಲಿ ಸಂದೇಹವಿಲ್ಲ' ಎಂದನು– ಗ್ರಹಿಸಿದನು.

॥ ವ್ಯಾಸ ಉವಾಚ ॥

ಏವಮುಕ್ತ್ವಾ ತು ಭಗವಾನ್ ಜಗಾಮಾಶು ಪಿತಾಮಹಃ ।
ವೈರಾಜಂ ಬ್ರಹ್ಮಸದನಂ ಬ್ರಹ್ಮರ್ಷಿಗಣಸೇವಿತಂ ॥ ೫೯ ॥

ತತೋ ದೇವಾಶ್ಚ ನಾಗಾಶ್ಚ ಗಂಧರ್ವಾ ಮುನಯಸ್ತಥಾ ।
ವರಪ್ರದಾನಂ ಶ್ರುತ್ವೈವ ಪಿತಾಮಹಮುಪಸ್ಥಿತಾಃ ॥ ೬೦ ॥

॥ ದೇವಾ ಊಚುಃ ॥

ವರೇಣಾನೇನ ಭಗವನ್ಬಾಧಿಷ್ಯತಿ ಸ ನೋಽಸುರಃ ।
ತತ್ಪ್ರಸೀದಾಶು ಭಗವನ್ವಧೋಽಪ್ಯಸ್ಯ ವಿಚಿಂತ್ಯತಾಂ ॥ ೬೧ ॥

ಭಗವನ್ಸರ್ವಭೂತಾನಾಂ ಸ್ವಯಂಭೂರಾದಿಕೃತ್ಪ್ರಭುಃ ।
ಸ್ರಷ್ಟಾ ಚ ಹವ್ಯಕವ್ಯಾನಾಮವ್ಯಕ್ತಂ ಪ್ರಕೃತಿರ್ಧ್ರುವಂ ॥ ೬೨ ॥

---

೫೯ ಎಲೈ ಮುನಿಗಳಿರಾ! ಈರೀತಿಯಾಗಿ ವರವನ್ನಿತ್ತು ಭಗವಂತನಾದ ಆ ಪಿತಾಮಹನು, ಬ್ರಹ್ಮರ್ಷಿಗಳಿಂದ ಸೇವಿತವಾದ ವೈರಾಜವೆಂಬ ತನ್ನ ಲೋಕಕ್ಕೆ ಹೊರಟುಹೋದನು.

೬೦. ಬಳಿಕ ಬ್ರಹ್ಮನೀರೀತಿ ವರವಿತ್ತುದನ್ನು ಕೇಳಿ ದೇವತೆಗಳೂ, ನಾಗರೂ, ಗಂಧರ್ವರೂ, ಮುನಿಗಳೂ, ಅವನ ಬಳಿಗೆ ಬಂದು,

೬೧. ಆತನನ್ನೀರೀತಿ ಪ್ರಾರ್ಥಿಸಿದರು. ಹೇ ಭಗವನ್, ನಿನ್ನ ಈ ವರದಿಂದ ಆ ಹಿರಣ್ಯಕಶಿಪುವು ನಮ್ಮೆಲ್ಲರನ್ನೂ ಕೊಂದುಹಾಕುವನು. ಆದುದರಿಂದ ನೀನು ನಮ್ಮಲ್ಲಿ ಪ್ರಸನ್ನನಾಗಿ ಬೇಗನೆ ಅವನ ಸಾವಿಗೆ ಉಪಾಯವನ್ನೂ ಆಲೋಚಿಸು.

೬೨. ಎಲೈ ಭಗವಂತನೇ, ನೀನೇ ಎಲ್ಲ ಪ್ರಾಣಿಗಳಿಗೂ ಆದಿಕಾರಣನಾದ ಸ್ವಯಂಸಂಭವನು. ಹವ್ಯ ಕವ್ಯಗಳನ್ನು ಸೃಷ್ಟಿಸಿದವನೂ, ಅವ್ಯಕ್ತವೂ, ಪ್ರಕೃತಿಯೂ, ಶಾಶ್ವತನೂ ನೀನೇ ಅಲ್ಲದೆ ಮತ್ತೆ ಯಾರೂ ಅಲ್ಲವು.

॥ ವ್ಯಾಸ ಉವಾಚ ॥

ತತೋ ಲೋಕಹಿತಂ ವಾಕ್ಯಂ ಶ್ರುತ್ವಾ ದೇವಃ ಪ್ರಜಾಪತಿಃ ।
ಪ್ರೋವಾಚ ಭಗವಾನ್ವಾಕ್ಯಂ ಸರ್ವದೇವಗಣಾಂಸ್ತಥಾ ॥ ೬೩ ॥

॥ ಬ್ರಹ್ಮೋವಾಚ ॥

ಅವಶ್ಯಂ ತ್ರಿದಶಾಸ್ತೇನ ಪ್ರಾಪ್ತವ್ಯಂ ತಪಸಃ ಫಲಂ ।
ತಪಸೋಽಂತೇ ಚ ಭಗವಾನ್ವಧಂ ವಿಷ್ಣುಃ ಕರಿಷ್ಯತಿ ॥ ೬೪ ॥

॥ ವ್ಯಾಸ ಉವಾಚ ॥

ಏತಚ್ಛ್ರುತ್ವಾ ಸುರಾಃ ಸರ್ವೇ ವಾಕ್ಯಂ ಪಂಕಜಜನ್ಮನಃ ।
ಸ್ವಾನಿ ಸ್ಥಾನಾನಿ ದಿವ್ಯಾನಿ ಜಗ್ಮುಸ್ತೇ ವೈ ಮುದಾನ್ವಿತಾಃ ॥ ೬೫ ॥

ಲಬ್ಧಮಾತ್ರೇ ವರೇ ಚಾಪಿ ಸರ್ವಾಃ ಸೋಽಬಾಧತ ಪ್ರಜಾಃ ।
ಹಿರಣ್ಯಕಶಿಪುರ್ದೈತ್ಯೋ ವರದಾನೇನ ದರ್ಪಿತಃ ॥ ೬೬ ॥

---

೬೩. ಆ ದೇವತೆಗಳ ಲೋಕಕ್ಕೆ ಕಲ್ಯಾಣವನ್ನುಂಟುಮಾಡುವ ಮಾತನ್ನು ಕೇಳಿ ಭಗವಂತನಾದ ಪ್ರಜಾಪತಿಯು ಎಲ್ಲ ದೇವತೆಗಳನ್ನೂ ಕುರಿತು,

೬೪. ಎಲೈ ದೇವತೆಗಳಿರಾ! ಅವನು ಮಾಡಿದ ತಪಸ್ಸಿಗೆ ಫಲವನ್ನು ಖಂಡಿತವಾಗಿಯೂ ಅವನು ಹೊಂದಲೇಬೇಕು. ತಪಃಫಲವು ಮುಗಿದ ನಂತರ ಭಗವಂತನಾದ ಶ್ರೀಹರಿಯು ಅವನ ವಧವನ್ನು ಮಾಡುವನು ಎಂದನು.

೬೫. ಎಲೈ ಮುನಿಗಳಿರಾ! ಈರೀತಿ ಬ್ರಹ್ಮನು ಹೇಳಿದ ಮಾತನ್ನು ಕೇಳಿ ದೇವತೆಗಳೆಲ್ಲರೂ ಸಂತೋಷವನ್ನು ತಾಳಿ ದಿವ್ಯವಾದ ತಂತಮ್ಮ ನಿವಾಸಗಳಿಗೆ ಹಿಂದಿರುಗಿದರು.

೬೬. ಇತ್ತಲಾಗಿ ದೈತ್ಯೇಶ್ವರನಾದ ಹಿರಣ್ಯಕಶಿಪುವು ಬ್ರಹ್ಮನಿತ್ತ ವರದಿಂದ ಕೊಬ್ಬಿದವನಾಗಿ ಪ್ರಜೆಗಳನ್ನು ಪೀಡಿಸತೊಡಗಿದನು

ಆಶ್ರಮೇಷು ಮಹಾಭಾಗಾನ್ಮುನೀನ್ಸ್ವೈ ಸಂಶಿತವ್ರತಾನ್ ।
ಸತ್ಯಧರ್ಮರತಾನ್ದಾಂತಾಂಸ್ತದಾ ಧರ್ಷಿತವಾಂಸ್ತಥಾ ॥ ೬೭ ॥

ತ್ರಿದಿವಸ್ಥಾಂಸ್ತಥಾ ದೇವಾನ್ಪರಾಜಿತ್ಯ ಮಹಾಬಲಃ ।
ತ್ರೈಲೋಕ್ಯಂ ವಶಮಾನೀಯ ಸ್ವರ್ಗೇ ವಸತಿ ಸೋऽಸುರಃ ॥ ೬೮ ॥

ಯದಾ ವರಮದೋನ್ಮತ್ತೋ ವಿಚರನ್ದಾನವೋ ಭುವಿ ।
ಯಜ್ಞೀಯಾನಕರೋದ್ದೈತ್ಯಾನಯಜ್ಞೀಯಾಶ್ಚ ದೇವತಾಃ ॥ ೬೯ ॥

ಆದಿತ್ಯಾ ವಸವಃ ಸಾಧ್ಯಾ ವಿಶ್ವೇ ಚ ಮರುತಸ್ತಥಾ ।
ಶರಣ್ಯಂ ಶರಣಂ ವಿಷ್ಣುಮುಪತಸ್ಥುರ್ಮಹಾಬಲಂ ॥ ೭೦ ॥

ದೇವಬ್ರಹ್ಮಮಯಂ ಯಜ್ಞಂ ಬ್ರಹ್ಮದೇವಂ ಸನಾತನಂ ।
ಭೂತಂ ಭವ್ಯಂ ಭವಿಷ್ಯಂ ಚ ಪ್ರಭುಂ ಲೋಕನಮಸ್ಕೃತಂ ।
ನಾರಾಯಣಂ ವಿಭುಂ ದೇವಂ ಶರಣ್ಯಂ ಶರಣಂ ಗತಾಃ ॥ ೭೧ ॥

---

೬೭. ಆಶ್ರಮಗಳಿಗೆ ನುಗ್ಗಿ, ಅಲ್ಲಿ ಸತ್ಯ ಧರ್ಮಗಳನ್ನು ಬಿಡದೆ, ಇಂದ್ರಿಯಗಳನ್ನೆಲ್ಲಾ ದಮನಮಾಡಿ ವ್ರತಾದಿಗಳಲ್ಲಿ ನಿರತರಾಗಿರುವ ಮಹಾತ್ಮರಾದ ಮುನಿಗಳಮೇಲೆ ನಾನಾರೀತಿ ಅಪಚಾರಮಾಡಿದನು.

೬೮. ಮತ್ತು ಆ ಬಲಾಢ್ಯನು ಸ್ವರ್ಗಲೋಕದಲ್ಲಿರುವ ದೇವತೆಗಳನ್ನು ಸೋಲಿಸಿ ಮೂರು ಲೋಕವನ್ನೂ ವಶಪಡಿಸಿಕೊಂಡು ತಾನು ಸ್ವರ್ಗದಲ್ಲಿಯೇ ವಾಸಮಾಡತೊಡಗಿದನು.

೬೯. ಅಷ್ಟೇ ಅಲ್ಲದೆ ವರಲಾಭದಿಂದ ಕೊಬ್ಬಿ ಹುಚ್ಚನಂತಾಗಿದ್ದ ಆ ದಾನವನು ಭೂಲೋಕದಲ್ಲೆಲ್ಲಾ ಸಂಚರಿಸುತ್ತಾ ಯಜ್ಞಭಾಗಗಳು ದೈತ್ಯರಿಗೇ ಸಲ್ಲುವಂತೆಯೂ, ದೇವತೆಗಳಿಗೆ ಸಲ್ಲದಂತೆಯೂ ಕಟ್ಟುಮಾಡಿದನು.

೭೦. ಆಗ ಆದಿತ್ಯರೂ, ವಸುಗಳೂ, ಸಾಧ್ಯರೂ, ವಿಶ್ವೇದೇವತೆಗಳೂ, ಮರುತ್ತುಗಳೂ, ಶರಣಾಗತರನ್ನು ಕೈಬಿಡದ ಆ ವಿಷ್ಣುವನ್ನು ಮರೆಹೊಕ್ಕರು.

೭೧. ದೇವಬ್ರಾಹ್ಮಣಸ್ವರೂಪನೂ, ಬ್ರಹ್ಮಾತ್ಮಕನೂ, ಸನಾತನನೂ ಭೂತಭವಿಷ್ಯತ್ಸ್ವರೂಪನೂ, ಸಕಲಲೋಕಗಳಿಂದಲೂ ನಮಸ್ಕರಿಸಲ್ಪಡುವವನೂ ಸರ್ವವ್ಯಾಪಿಯೂ ಆದ ನಾರಾಯಣನನ್ನು ಮರೆಹೊಕ್ಕು,

॥ ದೇವಾ ಊಚುಃ ॥

ತ್ರಾಯಸ್ವ ನೋಽದ್ಯ ದೇವೇಶ ಹಿರಣ್ಯಕಶಿಪೋರ್ಭಯಾತ್ ।
ತ್ವಂ ಹಿ ನಃ ಪರಮೋ ದೇವಸ್ತ್ವಂ ಹಿ ನಃ ಪರಮೋ ಗುರುಃ ॥ ೭೨ ॥

ತ್ವಂ ಹಿ ನಃ ಪರಮೋ ಧಾತಾ ಬ್ರಹ್ಮಾದೀನಾಂ ಸುರೋತ್ತಮ ।
ಉತ್ಫುಲ್ಲಾಮಲಪತ್ರಾಕ್ಷ ಶತ್ರುಪಕ್ಷಕ್ಷಯಂಕರ ।
ಕ್ಷಯಾಯ ದಿತಿವಂಶಸ್ಯ ಶರಣಂ ತ್ವಂ ಭವಸ್ವ ನಃ ॥ ೭೩ ॥

॥ ವಾಸುದೇವ ಉವಾಚ ॥

ಭಯಂ ತ್ಯಜಧ್ವಮಮರಾ ಅಭಯಂ ವೋ ದದಾಮ್ಯಹಂ ।
ತಥೈವ ತ್ರಿದಿವಂ ದೇವಾಃ ಪ್ರತಿಲಪ್ಸ್ಯಥ ಮಾ ಚಿರಂ ॥ ೭೪ ॥

ಏಷೋಽಹಂ ಸಗಣಂ ದೈತ್ಯಂ ವರದಾನೇನ ದರ್ಪಿತಂ ।
ಅವಧ್ಯಮಮರೇಂದ್ರಾಣಾಂ ದಾನವೇಂದ್ರಂ ನಿಹನ್ಮಿ ತಂ ॥ ೭೫ ॥

---

೭೨-೭೩. ಎಲೈ, ದೇವಾಧೀಶನೇ, ಹಿರಣ್ಯಕಶಿಪುವಿನ ಭಯದಿಂದ ತಲ್ಲಣಿಸುತ್ತಿರುವ ನಮ್ಮನ್ನು ಕಾಪಾಡು. ನೀನೇ ನಮಗೆ ದೇವಶ್ರೇಷ್ಠನು. ನೀನೇ ನಮಗೆ ಉತ್ತಮನಾದ ಗುರುವು. ನೀನೇ ನಮ್ಮ ತಂದೆಯು. ಎಲೈ ಅರಳಿದ ಕಮಲದಂತೆ ಮನೋಹರವಾದ ನಯನಗಳುಳ್ಳ ಪ್ರಭುವೇ! ಓ ಶತ್ರು ಪಕ್ಷಭಯಂಕರ! ದಿತಿಯ ಸಂತತಿಯ ವಿನಾಶಕ್ಕೋಸ್ಕರ ನಮಗೆ ಸಂರಕ್ಷಕನಾಗು.

೭೪. ಎಂದು ಆ ದೇವತೆಗಳು ಪ್ರಾರ್ಥಿಸಲು, ವಾಸುದೇವನು "ಎಲೈ ದೇವತೆಗಳಿರಾ! ನಿಮ್ಮ ಹೆದರಿಕೆಯನ್ನು ಬಿಡಿ. ನಿಮಗೆ ಅಭಯವನ್ನಿತ್ತಿರುವೆನು. ನೀವು ಬೇಗನೇ ನಿಮ್ಮ ನಿವಾಸವಾದ ಸ್ವರ್ಗಲೋಕವನ್ನು ಹೊಂದುವಿರಂತೆ.

೭೫. ವರಬಲದಿಂದ ಕೊಬ್ಬಿರುವ, ನಿಮ್ಮೆಲ್ಲರಿಂದಲೂ ಕೊಲ್ಲಲಸಾಧ್ಯನಾದ ಆ ದೈತ್ಯನನ್ನು ಅವನ ಪರಿವಾರದೊಡನೆ ನಾನೇ ಕೊಲ್ಲುವೆನು" ಎಂದನು.

॥ ವ್ಯಾಸ ಉವಾಚ ॥

**ಏವಮುಕ್ತ್ವಾ ತು ಭಗವಾನ್ವಿಸೃಜ್ಯ ತ್ರಿದಶೇಶ್ವರಾನ್ ।**
**ಹಿರಣ್ಯಕಶಿಪೋಃ ಸ್ಥಾನಮಾಜಗಾಮ ಮಹಾಬಲಃ ॥ ೭೬ ॥**

**ನರಸ್ಯಾರ್ಧತನುಂ ಕೃತ್ವಾ ಸಿಂಹಸ್ಯಾರ್ಧತನುಂ ಪ್ರಭುಃ ।**
**ನಾರಸಿಂಹೇನ ವಪುಷಾ ಪಾಣಿಂ ಸಂಸ್ಪೃಶ್ಯ ಪಾಣಿನಾ ॥ ೭೭ ॥**

**ಘನಜೀಮೂತಸಂಕಾಶೋ ಘನಜೀಮೂತನಿಸ್ವನಃ ।**
**ಘನಜೀಮೂತದೀಪ್ತೌಜಾ ಜೀಮೂತ ಇವ ವೇಗವಾನ್ ॥ ೭೮ ॥**

**ದೈತ್ಯಂ ಸೋಽತಿಬಲಂ ದೃಷ್ಟ್ವಾ ದೃಪ್ತಶಾರ್ದೂಲವಿಕ್ರಮಃ ।**
**ದೃಪ್ತೈರ್ದೈತ್ಯಗಣೈರ್ಗುಪ್ತಂ ಹತವಾನೇಕಪಾಣಿನಾ ॥ ೭೯ ॥**

---

೭೬. ಎಲೈ ಮುನಿಗಳಿರಾ! ಈರೀತಿಯಾಗಿ ಹೇಳಿ ಆ ಮಹಾಬಲಶಾಲಿಯಾದ ಶ್ರೀಹರಿಯು ದೇವತೆಗಳನ್ನು ಬೀಳ್ಕೊಟ್ಟು, ಹಿರಣ್ಯಕಶಿಪುವಿದ್ದ ಸ್ಥಳಕ್ಕೆ ಬಂದನು.

೭೭. ಆ ಪ್ರಭುವು ಆಗ ವಿಚಿತ್ರವಾದ ರೂಪವನ್ನು ತಾಳಿದ್ದನು. ಅರ್ಧ ದೇಹವು ಮನುಷ್ಯನಂತೆ. ಇನ್ನರ್ಧ ದೇಹವು ಸಿಂಹದಂತೆ. ಇಂತಹ ನರಸಿಂಹಾಕೃತಿಯಲ್ಲಿ ಕೈಮೇಲೆ ಕೈಯನ್ನು ತಟ್ಟುತ್ತಾ ಅವನು ಬಂದನು.

೭೮. ಆತನನ್ನು ಕಂಡರೆ ಭಾರಿ ಮೋಡವನ್ನು ನೋಡಿದಂತಾಗುತ್ತಿತ್ತು. ಆತನ ಧ್ವನಿಯೂ ಮೋಡದ ಮೊಳಗನ್ನೇ ಹೋಲುತ್ತಾ! ತುಂಬಿ ಬರುತ್ತಿತ್ತು. ಆ ನೀರಿನಿಂದ ತುಂಬಿದ ಮೋಡದಂತೆಯೇ ಆತನ ತೇಜಸ್ಸು ಉಜ್ಜ್ವಲವಾಗಿತ್ತು. ಮತ್ತು ಆತನ ವೇಗವೂ ಅದೇ ಮೋಡವನ್ನೇ ಹೋಲುತ್ತಿತ್ತು.

೭೯. ದರ್ಪಾಂಧರಾದ ದೈತ್ಯರ ನಡುವೆ ಸುರಕ್ಷಿತನಾಗಿದ್ದ ಮಹಾಬಲಶಾಲಿಯಾದ ದೈತ್ಯ ಚಕ್ರವರ್ತಿಯನ್ನು ನರಸಿಂಹನು ಕೊಬ್ಬಿದ ಹೆಬ್ಬುಲಿಯು ಮೇಲೆ ಬೀಳುವಂತೆ ಬಿದ್ದು ತನ್ನ ಅಂಗೈಯ ಒಂದೇ ಒಂದು ಏಟಿನಿಂದ ಸಂಹರಿಸಿದನು.

ನೃಸಿಂಹ ಏಷ ಕಥಿತೋ ಭೂಯೋಽಯಂ ವಾಮನಃ ಪರಃ ।
ಯತ್ರ ವಾಮನಮಾಸ್ಥಾಯ ರೂಪಂ ದೈತ್ಯವಿನಾಶನಂ ॥ ೮೦ ॥

ಬಲೇರ್ಬಲವತೋ ಯಜ್ಞೇ ಬಲಿನಾ ವಿಷ್ಣುನಾ ಪುರಾ ।
ವಿಕ್ರಮ್ಯೈಸ್ತ್ರಿಭಿರಕ್ಷೋಭ್ಯಾಃ ಕ್ಷೋಭಿತಾಸ್ತೇ ಮಹಾಸುರಾಃ ॥ ೮೧ ॥

ವಿಪ್ರಚಿತ್ತಿಃ ಶಿವಃ ಶಂಕುರಯಃಶಂಕುಸ್ತಥೈವ ಚ ।
ಅಯಃಶಿರಾ ಅಶ್ವಶಿರಾ ಹಯಗ್ರೀವಶ್ಚ ವೀರ್ಯವಾನ್ ॥ ೮೨ ॥

ವೇಗವಾನ್ಕೇತುಮಾನುಗ್ರಃ ಸೋಗ್ರವ್ಯಗ್ರೋ ಮಹಾಸುರಃ ।
ಪುಷ್ಕರಃ ಪುಷ್ಕಲಶ್ಚೈವ ಶಾಶ್ವೋಽಶ್ವಪತಿರೇವ ಚ ॥ ೮೩ ॥

ಪ್ರಹ್ರಾದೋಽಶ್ವಪತಿಃ ಕುಂಭಃ ಸಂಹ್ರಾದೋ ಗಮನಪ್ರಿಯಃ ।
ಅನುಹ್ರಾದೋ ಹರಿಹಯೋ ವಾರಾಹಃ ಸಂಹರೋಽನುಜಃ ॥ ೮೪ ॥

ಶರಭಃ ಶಲಭಶ್ಚೈವ ಕುಪಥಃ ಕ್ರೋಧನಃ ಕ್ರಥಃ ।
ಬೃಹತ್ಕೀರ್ತಿರ್ಮಹಾಜಿಹ್ವಃ ಶಂಕುಕರ್ಣೋ ಮಹಾಸ್ವನಃ ॥ ೮೫ ॥

---

೮೦. ಇದೇ ನೃಸಿಂಹಾವತಾರವು. ಇದನ್ನು ನಿಮಗೆ ತಿಳಿಸಿಯಾಯಿತು. ಮುಂದಿನದು ವಾಮನಾವತಾರವು. ಶ್ರೀಹರಿಯು ಈಸಲವೂ ದೈತ್ಯ ವಿನಾಶಕ್ಕೋಸ್ಕರವಾಗಿ ವಾಮನರೂಪವನ್ನು ವಹಿಸಬೇಕಾಯಿತು.

೮೧. ಹಿಂದೆ ಬಲಾಢ್ಯನಾದ ಬಲಿಚಕ್ರವರ್ತಿಯು ಯಾಗಮಾಡುತ್ತಿದ್ದಾಗ ಶ್ರೀಹರಿಯು ಯಾರಿಗೂ ಜಗ್ಗದಂತಹ ಭಾರಿ ಭಾರಿ ಅಸುರರನ್ನು ಮೂರು ವಿಕ್ರಮಗಳಿಂದ (ನಡಿಗೆ) ಕ್ಷೋಭಣಗೊಳಿಸಿದನು. (ಅಲ್ಲಾಡಿಸಿಬಿಟ್ಟನು)

೮೨–೮೫. ಆ ಅಸುರರು ಯಾರೆಂದರೆ;—ವಿಪ್ರಜತ್ತಿ, ಶಿವ, ಶಂಕು, ಅಯಶ್ಶಂಕು, ಅಯಶ್ಶಿರಸ್ಸು, ಅಶ್ವಶಿರಸ್ಸು, ಹಯಗ್ರೀವ, ವೇಗವಂತ, ಕೇತುಮಂತ, ಉಗ್ರ, ಉಗ್ರವ್ಯಗ್ರ, ಪುಷ್ಕರ, ಪುಷ್ಕಲ, ಸಾಶ್ವ, ಅಶ್ವಪತಿ, ಪ್ರಹ್ಲಾದ, ಅಶ್ವಪತಿ, ಕುಂಭ, ಸಂಹ್ರಾದ, ಗಮನಪ್ರಿಯ, ಅನುಹ್ಲಾದ, ಹರಿಹಯ, ವಾರಾಹ, ಸಂಹರ, ಅನುಜ, ಶರಭ, ಶಲಭ, ಕುಪಥ, ಕ್ರೋಧನ, ಕ್ರಥ, ಬೃಹತ್ಕೀರ್ತಿ, ಮಹಾಜಿಹ್ವ, ಶಂಕುಕರ್ಣ, ಮಹಾಸ್ವನ–

ದೀಪ್ತಿಜಿಹ್ವೋಽರ್ಕನಯನೋ ಮೃಗಪಾದೋ ಮೃಗಪ್ರಿಯಃ ।
ವಾಯುರ್ಗರಿಷ್ಠೋ ನಮುಚಿಃ ಸಂಬರೋ ವಿಸ್ಕರೋ ಮಹಾನ್ ॥ ೮೬ ॥

ಚಂದ್ರಹಂತಾ ಕ್ರೋಧಹಂತಾ ಕ್ರೋಧವರ್ಧನ ಏವ ಚ ।
ಕಾಲಕಃ ಕಾಲಕೋಪಶ್ಚ ವೃತ್ರಃ ಕ್ರೋಧೋ ವಿರೋಚನಃ ॥ ೮೭ ॥

ಗರಿಷ್ಠಶ್ಚ ವರಿಷ್ಠಶ್ಚ ಪ್ರಲಂಬನರಕಾವುಭೌ ।
ಇಂದ್ರತಾಪನವಾತಾಪೀ ಕೇತುಮಾನ್ಬಲದರ್ಪಿತಃ ॥ ೮೮ ॥

ಅಸಿಲೋಮಾ ಪುಲೋಮಾ ಚ ಬಾಷ್ಕಲಃ ಪ್ರಮದೋ ಮದಃ ।
ಸ್ವಮಿಶ್ರಃ ಕಾಲವದನಃ ಕರಾಲಃ ಕೇಶಿರೇವ ಚ ॥ ೮೯ ॥

ಏಕಾಕ್ಷಶ್ಚಂದ್ರಮಾ ರಾಹುಃ ಸಂಹ್ರಾದಃ ಸಂಬರಃ ಸ್ವನಃ ।
ಶತಘ್ನೀಚಕ್ರಹಸ್ತಾಶ್ಚ ತಥಾ ಮುಶಲಪಾಣಯಃ ॥ ೯೦ ॥

ಅಶ್ವಯಂತ್ರಾಯುಧೋಪೇತಾ ಭಿಂದಿಪಾಲಾಯುಧಾಸ್ತಥಾ ।
ಶೂಲೋಲೂಖಲಹಸ್ತಾಶ್ಚ ಪರಶ್ವಧಧರಾಸ್ತಥಾ ॥ ೯೧ ॥

---

೮೬–೯೦. ದೀಪ್ತಜಿಹ್ವ, ಅರ್ಕನಯನ, ಮೃಗಪಾದ, ಮೃಗಪ್ರಿಯ, ವಾಯು, ಗರಿಷ್ಠ, ನಮುಚಿ, ಶಂಬರ, ವಿಸ್ಕರ, ಚಂದ್ರಹಂತೃ, ಕ್ರೋಧ ಹಂತೃ, ಕ್ರೋಧವರ್ಧನ, ಕಾಲಕ, ಕಾಲಕೋಪ, ವೃತ್ರ, ಕ್ರೋಧ, ವಿರೋ ಚನ, ಗರಿಷ್ಠ, ವರಿಷ್ಠ, ಪ್ರಲಂಬ, ನರಕ, ಇಂದ್ರತಾಪನ, ವಾತಾಪಿ, ಕೇತು ಮಾ, ಬಲದರ್ಪಿತ, ಅಸಿಲೋಮ, ಪುಲೋಮ, ಬಾಷ್ಕಲ, ಪ್ರಮದ, ಮದ, ಸ್ವಮಿಶ್ರ, ಕಾಲವದನ, ಕರಾಲ, ಕೇಶಿ, ಏಕಾಕ್ಷ, ಚಂದ್ರಮಸ್ಸು, ರಾಹು, ಸಂಹ್ರಾದ, ಸಂಬರ, ಸ್ವನ ಮೊದಲಾದವರು. ಇವರುಗಳಲ್ಲಿ ಕೆಲವರು ಶತಘ್ನಿಗಳನ್ನೂ ಚಕ್ರಗಳನ್ನೂ ಹಿಡಿದಿದ್ದರು. ಕೆಲವರು ಮುಸಲವನ್ನು ಧರಿಸಿದ್ದರು.

೯೧. ಮತ್ತೆ ಕೆಲವರು ಅಶ್ವಯಂತ್ರವೆಂಬ ಆಯುಧವನ್ನೂ ಭಿಂದಿ ಪಾಲವೆಂಬ ಆಯುಧವನ್ನೂ ವಹಿಸಿದ್ದರು. ಇನ್ನು ಕೆಲವರು ಶೂಲವನ್ನೂ ಉಲೂಖಲವನ್ನೂ ಪರಶ್ವಧವನ್ನೂ ಧರಿಸಿದ್ದರು.

ಪಾಶಮುದ್ಗರಹಸ್ತಾಶ್ಚ ತಥಾ ಪರಿಘಪಾಣಯಃ ।
ಮಹಾಶಿಲಾಪ್ರಹರಣಾಃ ಶೂಲಹಸ್ತಾಶ್ಚ ದಾನವಾಃ ॥ ೯೨ ॥

ನಾನಾಪ್ರಹರಣಾ ಘೋರಾ ನಾನಾವೇಶಾ ಮಹಾಬಲಾಃ ।
ಕೂರ್ಮಕುಕ್ಕುಟವಕ್ತ್ರಾಶ್ಚ ಶಶೋಲೂಕಮುಖಾಸ್ತಥಾ ॥ ೯೩ ॥

ಖರೋಷ್ಟ್ರವದನಾಶ್ಚೈವ ವರಾಹವದನಾಸ್ತಥಾ ।
ಮಾರ್ಜಾರಶಿಖಿವಕ್ತ್ರಾಶ್ಚ ಮಹಾವಕ್ತ್ರಾಸ್ತಥಾ ಪರೇ ॥ ೯೪ ॥

ನಕ್ರಮೇಷಾನನಾಃ ಶೂರಾ ಗೋಜಾವಿಮಹಿಷಾನನಾಃ ।
ಗೋಧಾಶಲ್ಲಕಿವಕ್ತ್ರಾಶ್ಚ ಕ್ರೋಷ್ಟುವಕ್ತ್ರಾಶ್ಚ ದಾನವಾಃ ॥ ೯೫ ॥

ಆಖುದರ್ದುರವಕ್ತ್ರಾಶ್ಚ ಘೋರಾ ವೃಕಮುಖಾಸ್ತಥಾ ।
ಭೀಮಾ ಮಕರವಕ್ತ್ರಾಶ್ಚ ಕ್ರೌಂಚವಕ್ತ್ರಾಶ್ಚ ದಾನವಾಃ ॥ ೯೬ ॥

---

೯೨. ಬೇರೆ ಕೆಲವರು ಪಾಶಗಳನ್ನೂ ಮುದ್ಗರಗಳನ್ನೂ ಪರಿಘಗಳನ್ನೂ, ಭಾರಿ ಭಾರಿ ಶಿಲೆಗಳನ್ನೂ, ಶೂಲಗಳನ್ನೂ ಕೈಯಲ್ಲಿ ಹಿಡಿದಿದ್ದರು.

೯೩. ಈರೀತಿಯಾಗಿ ನಾನಾರೀತಿಯ ಆಯುಧಗಳನ್ನು ಹಿಡಿದು, ಘೋರಾಕೃತಿಯುಳ್ಳ ಮಹಾಬಲಶಾಲಿಗಳಾದ ದಾನವರು ನಾನಾವೇಷಗಳನ್ನು ಧರಿಸಿದ್ದರು. ಒಬ್ಬರಿಗೆ ಆಮೆಯಂತೆಯೂ ಕೋಳಿಯಂತೆಯೂ ಮುಖ. ಮತ್ತೊಬ್ಬರಿಗೆ ಮೊಲದಂತೆಯೂ, ಗೂಬೆಯಂತೆಯೂ ಮುಖ.

೯೪. ಕೆಲವರಿಗೆ ಒಂಟೆಯಂತೆಯೂ, ಕತ್ತೆಯಂತೆಯೂ, ಹಂದಿಯಂತೆಯೂ ಮುಖಗಳು. ಮತ್ತೆ ಕೆಲವರಿಗೆ ಬಹುದೊಡ್ಡ ಮುಖಗಳು.

೯೫. ಕೆಲವರು ಮೊಸಳೆಯ ಮುಖದವರು. ಕೆಲವರು ಟಗರಿನ ಮೋರೆಯವರು. ಮತ್ತೆ ಕೆಲವರ ಮುಖಗಳಂತೂ ಹಸುವನ್ನೂ, ಆಡನ್ನೂ, ಕುರಿಯನ್ನೂ, ಕೋಣನನ್ನೂ, ಉಡವನ್ನೂ, ಮುಳ್ಳುಹಂದಿಯನ್ನೂ, ನರಿಯನ್ನೂ ಹೋಲುತ್ತಿದ್ದುವು.

೯೬. ಕೆಲವರಿಗೆ ಇಲಿಯಂತೆಯೂ, ಮತ್ತೆ ಕೆಲವರಿಗೆ ಕಪ್ಪೆಯಂತೆಯೂ, ಇನ್ನು ಕೆಲವರಿಗೆ ತೋಳದಂತೆಯೂ, ಬೇರೆ ಕೆಲವರಿಗೆ ಮೊಸಳೆಯಂತೆಯೂ, ಮತ್ತೂ ಕೆಲವರಿಗೆ ಕ್ರೌಂಚಪಕ್ಷಿಯಂತೆಯೂ ಮುಖಗಳಿದ್ದುವು.

**ಅಶ್ವಾನನಾಃ ಖರಮುಖಾ ಮಯೂರವದನಾಸ್ತಥಾ ।**
**ಗಜೇಂದ್ರಚರ್ಮವಸನಾಸ್ತಥಾ ಕೃಷ್ಣಾಜಿನಾಂಬರಾಃ ॥ ೯೭ ॥**

**ಚೀರಸಂವೃತಗಾತ್ರಾಶ್ಚ ತಥಾ ನೀಲಕವಾಸಸಃ ।**
**ಉಷ್ಣೀಷಿಣೋ ಮುಕುಟಿನಸ್ತಥಾ ಕುಂಡಲಿನೋಽಸುರಾಃ ॥ ೯೮ ॥**

**ಕಿರೀಟಿನೋ ಲಂಬಶಿಖಾಃ ಕಂಬುಗ್ರೀವಾಃ ಸುವರ್ಚಸಃ ।**
**ನಾನಾವೇಷಧರಾ ದೈತ್ಯಾ ನಾನಾಮಾಲ್ಯಾನುಲೇಪನಾಃ ॥ ೯೯ ॥**

**ಸ್ವಾನ್ಯಾಯುಧಾನಿ ಸಂಗೃಹ್ಯ ಪ್ರದೀಪ್ತಾನಿ ಚ ತೇಜಸಾ ।**
**ಕ್ರಮಮಾಣಂ ಹೃಷೀಕೇಶಮುಪಾವರ್ತಂತ ಸರ್ವಶಃ ॥ ೧೦೦ ॥**

---

೯೭. ಕೆಲದಾನವರು ಕುದುರೆಯ ಮುಖವನ್ನೂ, ಇನ್ನು ಕೆಲವು ದಾನವರು ಕತ್ತೆಯ ಮುಖವನ್ನೂ ಬೇರೆ ಕೆಲವರು ನವಿಲಿನ ಮುಖವನ್ನೂ ಹೊಂದಿದ್ದರು. ಕೆಲವರು ಆನೆಯ ಚರ್ಮವನ್ನೂ, ಹಲವರು ಕೃಷ್ಣಾಜಿನವನ್ನೂ ಉಟ್ಟಿದ್ದರು.

೯೮. ಕೆಲವರು ನಾರುಮಡಿಯನ್ನೂ ಕೆಲವರು ಕಪ್ಪುಬಟ್ಟೆಯನ್ನೂ ಉಟ್ಟಿದ್ದರು. ಆ ಅಸುರರು ತಲೆಯಮೇಲೆ ಉಷ್ಣೀಷವನ್ನು ಕೆಲವರೂ, ಕಿರೀಟವನ್ನು ಕೆಲವರೂ, ಧರಿಸಿದ್ದರು. ಕೆಲವರು ಕಿವಿಗಳಲ್ಲಿ ಕುಂಡಲಗಳನ್ನು ಧರಿಸಿದ್ದರು.

೯೯–೧೦೦. ಈರೀತಿಯಾಗಿ ನಾನಾವಿಧವಾದ ವೇಷಗಳನ್ನು ಧರಿಸಿ ನಾನಾವಿಧವಾದ ಹೂವಿನಮಾಲೆಗಳನ್ನು ಹಾಕಿಕೊಂಡು, ತಲೆಗೂದಲನ್ನು ಇಳಿಬಿಟ್ಟುಕೊಂಡು, ಕಿರೀಟವನ್ನು ಧರಿಸಿ, ಶಂಖದಂತಿರುವ ಕುತ್ತಿಗೆಯುಳ್ಳ, ಆ ತೇಜಸ್ವಿಗಳಾದ ದೈತ್ಯರು, ಹೊಳಪಿನಿಂದ ಥಳಥಳಿಸುತ್ತಿದ್ದ ತಮ್ಮ ತಮ್ಮ ಆಯುಧಗಳನ್ನು ಝುಳಪಿಸುತ್ತಾ ಮೇಲೆಮೇಲೆ ಬೆಳೆಯುತ್ತಿದ್ದ ಆ ಹೃಷೀಕೇಶನನ್ನು ಸುತ್ತಲೂ ಮುತ್ತಿಕೊಂಡರು.

ಪ್ರಮಥ್ಯ ಸರ್ವಾನ್ದೈತೇಯಾನ್ಪಾದಹಸ್ತತಲೈರ್ವಿಭುಃ ।
ರೂಪಂ ಕೃತ್ವಾ ಮಹಾಭೀಮಂ ಜಹಾರಾಶು ಸ ಮೇದಿನೀಂ ॥ ೧೦೧ ॥

ತಸ್ಯ ವಿಕ್ರಮತೋ ಭೂಮಿಂ ಚಂದ್ರಾದಿತ್ಯೌ ಸ್ತನಾಂತರೇ ।
ನಭಃ ಪ್ರಕ್ರಮಮಾಣಸ್ಯ ನಾಭ್ಯಾಂ ಕಿಲ ತಥಾ ಸ್ಥಿತೌ ॥ ೧೦೨ ॥

ಪರಮಾಕ್ರಮಮಾಣಸ್ಯ ಜಾನುದೇಶೇ ವ್ಯವಸ್ಥಿತೌ ।
ವಿಷ್ಣೋರಮಿತವೀರ್ಯಸ್ಯ ವದಂತ್ಯೇವಂ ದ್ವಿಜಾತಯಃ ॥ ೧೦೩ ॥

ಹೃತ್ವಾ ಸ ಮೇದಿನೀಂ ಕೃತ್ಸ್ನಾಂ ಹತ್ವಾ ಚಾಸುರಪುಂಗವಾನ್ ।
ದದೌ ಶಕ್ರಾಯ ವಸುಧಾಂ ವಿಷ್ಣುರ್ಬಲವತಾಂ ವರಃ ॥ ೧೦೪ ॥

ಏಷ ವೋ ವಾಮನೋ ನಾಮ ಪ್ರಾದುರ್ಭಾವೋ ಮಹಾತ್ಮನಃ ।
ವೇದವಿದ್ಭಿರ್ದ್ವಿಜೈರೇತತ್ಕಥ್ಯತೇ ವೈಷ್ಣವಂ ಯಶಃ ॥ ೧೦೫ ॥

---

೧೦೧. ಆ ವಿಭುವು ಮಹಾಭಯಂಕರವಾದ ರೂಪವನ್ನು ತಾಳಿ ತನ್ನ ಅಂಗೈಗಳಿಂದಲೂ, ಅಂಗಾಲುಗಳಿಂದಲೂ, ದೈತ್ಯರೆಲ್ಲರನ್ನೂ ಅರೆದುಬಿಟ್ಟುದಲ್ಲದೆ ಅವರಿಂದ ಭೂಮಿಯನ್ನು ಶೀಘ್ರವಾಗಿ ಕಿತ್ತುಕೊಂಡನು.

೧೦೨–೧೦೩. ಅಪರಿಮಿತವಾದ ವೀರ್ಯವುಳ್ಳ ವಿಷ್ಣುವು ಭೂಮಿಯನ್ನು ಅಳೆಯಲು ಬೆಳೆಯುತ್ತಿದ್ದಾಗ ಸೂರ್ಯಚಂದ್ರರು ಅವನ ಸ್ತನದ ನೇರದಲ್ಲೂ (ಎದೆಯ ನೇರ) ಅಂತರಿಕ್ಷವು ಹೊಕ್ಕುಳಿನಲ್ಲಿಯೂ, ಪರವೆಂಬುದು ಮಂಡಿಯ ಪ್ರದೇಶದಲ್ಲಿ ಇದ್ದಿತೆಂದೂ ಪ್ರಾಜ್ಞರಾದವರು ಹೇಳುವರು.

೧೦೪. ಆ ತ್ರಿವಿಕ್ರಮನು ಅಸುರಶ್ರೇಷ್ಠರೆಲ್ಲರನ್ನೂ ಕೊಂದುದಲ್ಲದೆ, ಅವರಿಂದ ಭೂಮಿಯೆಲ್ಲವನ್ನೂ ಕಸಿದುಕೊಂಡು ಇಂದ್ರನಿಗೆ ಕೊಟ್ಟುಬಿಟ್ಟನು.

೧೦೫. ಎಲೈ ಮುನಿಗಳಿರಾ! ಈ ವಾಮನಾವತಾರ ವೃತ್ತಾಂತವನ್ನು ತಿಳಿಸಿಯಾಯಿತು. ಈರೀತಿಯಾಗಿ ವಿಷ್ಣುವಿನ ಯಶಸ್ಸನ್ನು ವೇದಾರ್ಥವನ್ನು ಬಲ್ಲ ಬ್ರಾಹ್ಮಣರು ವಿವರಿಸುವರು.

ಭೂಯೋ ಭೂತಾತ್ಮನೋ ವಿಷ್ಣೋಃ ಪ್ರಾದುರ್ಭಾವೋ ಮಹಾತ್ಮನಃ ।
ದತ್ತಾತ್ರೇಯ ಇತಿ ಖ್ಯಾತಃ ಕ್ಷಮಯಾ ಪರಯಾ ಯುತಃ ॥ ೧೦೬ ॥

ತೇನ ನಷ್ಟೇಷು ವೇದೇಷು ಪ್ರಕ್ರಿಯಾಸು ಮಖೇಷು ಚ ।
ಚಾತುರ್ವರ್ಣ್ಯೇ ಚ ಸಂಕೀರ್ಣೇ ಧರ್ಮೇ ಶಿಥಿಲತಾಂ ಗತೇ ॥ ೧೦೭ ॥

ಅತಿವರ್ಧತಿ ಚಾಧರ್ಮೇ ಸತ್ಯೇ ನಷ್ಟೇಽನೃತೇ ಸ್ಥಿತೇ ।
ಪ್ರಜಾಸು ಶೀರ್ಯಮಾಣಾಸು ಧರ್ಮೇ ಚಾಕುಲತಾಂ ಗತೇ ॥ ೧೦೮ ॥

ಸಯಜ್ಞಾಃ ಸಕ್ರಿಯಾ ವೇದಾಃ ಪ್ರತ್ಯಾನೀತಾ ಹಿ ತೇನ ವೈ ।
ಚಾತುರ್ವರ್ಣ್ಯಮಸಂಕೀರ್ಣಂ ಕೃತಂ ತೇನ ಮಹಾತ್ಮನಾ ॥ ೧೦೯ ॥

---

೧೦೬. ಮತ್ತೆ ಸರ್ವಭೂತಾತ್ಮಕನಾದ ಆ ಮಹಾಪುರುಷನು, ಅಪಾರವಾದ ಕರುಣೆಗೆ ನೆಲೆಯೆನಿಸಿದ ದತ್ತಾತ್ರೇಯ ಮುನಿಯಾಗಿ ಅವತಾರ ಮಾಡಿದನು.

೧೦೭-೧೦೯. ಆ ಮಹಾತ್ಮನು ಜಗತ್ತಿಗೆ ಭಾರಿ ಉಪಕಾರವನ್ನು ಮಾಡಿದನು. ಹಿಂದೆ ವೇದಗಳೆಲ್ಲವೂ ನಷ್ಟವಾದುವು. ಅವುಗಳೊಡನೆಯೇ ಶಾಸ್ತ್ರೀಯ ಪ್ರಕ್ರಿಯೆಗಳೆಲ್ಲವೂ ಮರೆತುಹೋದುವು. ಹೀಗಾಗಿ ಯಜ್ಞಗಳು ಹಾಳಾದುವು. ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣಗಳು ಕಲಬೆರಕೆಯಾಗಿ ವ್ಯವಸ್ಥೆಯಿಲ್ಲವಾಯಿತು. ಧರ್ಮವು ಇದರಿಂದ ಶಿಥಿಲತೆಯನ್ನು ಪಡೆಯುತ್ತಾ ಬಂದಿತು. ಈಪರಿಸ್ಥಿತಿಯ ದೆಸೆಯಿಂದ ಅಧರ್ಮವು ಅಭಿವೃದ್ಧಿಯನ್ನೈದಿತು. ಸತ್ಯವು ಕಣ್ಮರೆಯಾಯಿತು. ಸುಳ್ಳು ನೆಲೆಯಾಗಿ ನಿಂತಿತು. ಪ್ರಜೆಗಳು ಹಾಳಾಗುತ್ತಾ ಬಂದರು. ಹೀಗೆ ಧರ್ಮವು ವಿಷಮಾವಸ್ಥೆಯನ್ನು ಮುಟ್ಟಿದುದನ್ನು ಕಂಡು ಮಹಾನುಭಾವನಾದ ದತ್ತಾತ್ರೇಯನು, ಯಜ್ಞಗಳನ್ನೂ, ಅದರ ಪ್ರಕ್ರಿಯೆಗಳನ್ನೂ, ವೇದಗಳನ್ನೂ ಮೊದಲಿನಂತೆ ವ್ಯವಸ್ಥೆಗೊಳಿಸಿದನು. ಆಗ ಚಾತುರ್ವರ್ಣ್ಯವು ಸಂಕರವಾಗುವುದು ತಪ್ಪಿ ಶುದ್ಧವಾಗಿ ನಿಂತಿತು.

ತೇನ ಹೈಹಯರಾಜಸ್ಯ ಕಾರ್ತವೀರ್ಯಸ್ಯ ಧೀಮತಃ ।
ವರದೇನ ವರೋ ದತ್ತೋ ದತ್ತಾತ್ರೇಯೇಣ ಧೀಮತಾ ॥ ೧೧೦ ॥

ಏತದ್ಬಾಹುದ್ವಯಂ ಯತ್ತೇ ತತ್ತೇ ಮಮ ಕೃತೇ ನೃಪ ।
ಶತಾನಿ ದಶ ಬಾಹೂನಾಂ ಭವಿಷ್ಯಂತಿ ನ ಸಂಶಯಃ ॥ ೧೧೧ ॥

ಪಾಲಯಿಷ್ಯಸಿ ಕೃತ್ಸ್ನಾಂ ಚ ವಸುಧಾಂ ವಸುಧೇಶ್ವರ ।
ದುರ್ನಿರೀಕ್ಷ್ಯೋಽರಿವೃಂದಾನಾಂ ಯುದ್ಧಸ್ಥಶ್ಚ ಭವಿಷ್ಯಸಿ ॥ ೧೧೨ ॥

ಏಷ ವೋ ವೈಷ್ಣವಃ ಶ್ರೀಮಾನ್ಪ್ರಾದುರ್ಭಾವೋಽದ್ಭುತಃ ಶುಭಃ ।
ಭೂಯಶ್ಚ ಜಾಮದಗ್ನ್ಯೋಽಯಂ ಪ್ರಾದುರ್ಭಾವೋ ಮಹಾತ್ಮನಃ ॥೧೧೩॥

ಯತ್ರ ಬಾಹುಸಹಸ್ರೇಣ ದ್ವಿಷತಾಂ ದುರ್ಜಯಂ ರಣೇ ।
ರಾಮೋಽರ್ಜುನಮನೀಕಸ್ಥಂ ಜಘಾನ ನೃಪತಿಂ ಪ್ರಭುಃ ॥ ೧೧೪ ॥

---

೧೧೦. ಪ್ರಾಜ್ಞನಾದ ಆ ದತ್ತಾತ್ರೇಯನು ಹೈಹಯದೇಶದ ರಾಜನಾದ ಕಾರ್ತವೀರ್ಯನಿಗೆ ಈರೀತಿ ವರವನ್ನಿತ್ತನು.

೧೧೧–೧೧೨. "ಎಲೈ ಪೃಥ್ವೀಪತಿಯೇ! ನಿನ್ನೀ ಎರಡು ಬಾಹುಗಳು ನನ್ನ ಅನುಗ್ರಹದಿಂದ ಒಂದು ಸಹಸ್ರ ಬಾಹುಗಳಾಗುವುವು. ಇದರಲ್ಲಿ ಸಂಶಯಕ್ಕೆ ಆಸ್ಪದವಿಲ್ಲವು. ಅಲ್ಲದೆ ಸಮಗ್ರವಾದ ಭೂಮಂಡಲಕ್ಕೆ ನೀನು ಪಾಲಕನಾಗುವೆ. ನೀನು ಯುದ್ಧಕ್ಕೆ ನಿಂತರೆ ಶತ್ರುಗಳಾದವರು ಕಣ್ಣೆತ್ತಿ ಸಹ ನಿನ್ನನ್ನು ನೋಡಲಾರರು" ಎಂದು.

೧೧೩-೧೧೪. ಇದೀಗ ವಿಷ್ಣುವಿನ ಶುಭಕರವಾದ ದತ್ತಾತ್ರೇಯಾವತಾರವು 'ಜಾಮದಗ್ನ್ಯ' ವೆಂಬುದು. ಶತ್ರುಗಳಾರಿಗೂ ಗೆಲ್ಲಲಾಗದಿದ್ದಂತಹ, ಸಹಸ್ರಬಾಹುವಾದ ಆ ಕಾರ್ತವೀರ್ಯಾರ್ಜುನನನ್ನು ಜಮದಗ್ನಿಯ ಪುತ್ರನಾದ ಪರಶುರಾಮನು ಯುದ್ಧದಲ್ಲಿ ಸಂಹರಿಸಿದನು.

ರಥಸ್ಥಂ ಪಾರ್ಥಿವಂ ರಾಮಃ ಪಾತಯಿತ್ವಾರ್ಜುನಂ ಭುವಿ ।
ಧರ್ಷಯಿತ್ವಾರ್ಜುನಂ ರಾಮಃ ಕ್ರೋಶಮಾನಂ ಚ ಮೇಘವತ್ ॥ ೧೧೫ ॥

ಕೃತ್ಸ್ನಂ ಬಾಹುಸಹಸ್ರಂ ಚ ಚಿಚ್ಛೇದ ಭೃಗುನಂದನಃ ।
ಪರಶ್ವಧೇನ ದೀಪ್ತೇನ ಜ್ಞಾತಿಭಿಃ ಸಹಿತಸ್ಯ ವೈ ॥ ೧೧೬ ॥

ಕೀರ್ಣಾ ಕ್ಷತ್ರಿಯಕೋಟೀಭಿರ್ಮೇರುಮಂದರಭೂಷಣಾ ।
ತ್ರಿಃ ಸಪ್ತಕೃತ್ವಃ ಪೃಥಿವೀ ತೇನ ನಿಃಕ್ಷತ್ರಿಯಾ ಕೃತಾ ॥ ೧೧೭ ॥

ಕೃತ್ವಾ ನಿಃಕ್ಷತ್ರಿಯಾಂ ಚೈನಾಂ ಭಾರ್ಗವಃ ಸುಮಹಾಯಶಾಃ ।
ಸರ್ವಪಾಪವಿನಾಶಾಯ ವಾಜಿಮೇಧೇನ ಚೇಷ್ಟವಾನ್ ॥ ೧೧೮ ॥

ಯಸ್ಮಿನ್ಯಜ್ಞೇ ಮಹಾದಾನೇ ದಕ್ಷಿಣಾಂ ಭೃಗುನಂದನಃ ।
ಮಾರೀಚಾಯ ದದೌ ಪ್ರೀತಃ ಕಶ್ಯಪಾಯ ವಸುಂಧರಾಂ ॥ ೧೧೯ ॥

---

೧೧೫-೧೧೬. ಭೃಗುವಂಶೋತ್ಪನ್ನನಾದ ಜಾಮದಗ್ನ್ಯನು ಕೃತವೀರ್ಯ ಪುತ್ರನಾದ ಅರ್ಜುನನನ್ನು ಎದುರಿಸಿ ತೇರಿನಲ್ಲಿ ಕುಳಿತು ಯುದ್ಧಮಾಡುತ್ತಿದ್ದ ಅವನನ್ನು ನೆಲಕ್ಕೆ ಕೆಡವಿ ತನ್ನ ಜ್ವಲಿಸುತ್ತಿರುವ ಗಂಡುಗೊಡಲಿಯಿಂದ ಅವನ ಸಾವಿರ ತೋಳುಗಳನ್ನೂ ಕತ್ತರಿಸುದುದಲ್ಲದೆ ಅವನನ್ನೂ ಅವನ ಬಲವನ್ನೂ ಸಂಹರಿಸಿದನು.

೧೧೭. ಮೇರು ಮಂದರ ಪರ್ವತಗಳೇ ಒಡವೆಯಾಗಿವುಳ್ಳ ಈ ಭೂಮಿಯನ್ನು ಇಪ್ಪತ್ತೊಂದುಸಲ ಸುತ್ತಿ ಅಲ್ಲಿ ಎಲ್ಲೆಲ್ಲೂ ತುಂಬಿಹೋಗಿದ್ದ ದುಷ್ಟ ಕ್ಷತ್ರಿಯರನ್ನು ಒಂಗು ಪಿಳ್ಳೆಯೂ ಉಳಿಯದಂತೆ ಸಂಹಾರಮಾಡಿದನು.

೧೧೮-೧೧೯. ಆ ಭೃಗುನಂದನನು ಭೂಮಿಯನ್ನು ಗೆದ್ದನಂತರ ತಾನು ಯುದ್ಧದಲ್ಲಿ ಅನೇಕರನ್ನು ಕೊಂದುದರಿಂದ ಉಂಟಾದ ಪಾಪವನ್ನು ಪರಿಹರಿಸಿಕೊಳ್ಳಲು ಅಶ್ವಮೇಧವೆಂಬ ಒಂದು ಭಾರಿ ಯಜ್ಞವನ್ನು ಮಾಡಿ ಮರೀಚಿ ಪುತ್ರನಾದ ಕಶ್ಯಪನಿಗೆ ತಾನು ಗೆದ್ದ ಭೂಮಿಯೆಲ್ಲವನ್ನೂ ದಕ್ಷಿಣೆಯಾಗಿ ಇತ್ತನು.

ವಾರಣಾಂಸ್ತುರಗಾನ್ ಶುಭ್ರಾನ್ರಥಾಂಶ್ಚ ರಥಿನಾಂ ವರಃ ।
ಹಿರಣ್ಯಮಕ್ಷಯಂ ಧೇನುರ್ಗಜೇಂದ್ರಾಂಶ್ಚ ಮಹೀಪತಿಃ　　॥ ೧೨೦ ॥

ದದೌ ತಸ್ಮಿನ್ಮಹಾಯಜ್ಞೇ ವಾಜಿಮೇಧೇ ಮಹಾಯಶಾಃ ।
ಅದ್ಯಾಪಿ ಚ ಹಿತಾರ್ಥಾಯ ಲೋಕಾನಾಂ ಭೃಗುನಂದನಃ　　॥ ೧೨೧ ॥

ಚರಮಾಣಸ್ತಪೋ ಘೋರಂ ಜಾಮದಗ್ನ್ಯಃ ಪುನಃ ಪ್ರಭುಃ ।
ಆಸ್ತೇ ವೈ ದೇವವಚ್ಛ್ರೀಮಾನ್ಮಹೇಂದ್ರೇ ಪರ್ವತೋತ್ತಮೇ　　॥ ೧೨೨ ॥

ಏಷ ವಿಷ್ಣೋಃ ಸುರೇಶಸ್ಯ ಶಾಶ್ವತಸ್ಯಾವ್ಯಯಸ್ಯ ಚ ।
ಜಾಮದಗ್ನ್ಯ ಇತಿ ಖ್ಯಾತಃ ಪ್ರಾದುರ್ಭಾವೋ ಮಹಾತ್ಮನಃ　　॥ ೧೨೩ ॥

ಚತುರ್ವಿಂಶೇ ಯುಗೇ ವಾಪಿ ವಿಶ್ವಾಮಿತ್ರಪುರಃಸರಃ ।
ಜಜ್ಞೇ ದಶರಥಸ್ಯಾಥ ಪುತ್ರಃ ಪದ್ಮಾಯತೇಕ್ಷಣಃ　　॥ ೧೨೪ ॥

---

೧೨೦-೧೨೧. ಆ ಅಶ್ವಮೇಧಯಾಗದಲ್ಲಿ ಆನೆಗಳನ್ನೂ ಶುಭ್ರವಾದ ಕುದುರೆಗಳನ್ನೂ, ರಥಗಳನ್ನೂ, ಲೆಕ್ಕವಿಲ್ಲದಷ್ಟು ಸುವರ್ಣವನ್ನೂ, ಹಸುಗಳನ್ನೂ ಮದ್ದಾನೆಗಳನ್ನೂ, ದಾನಮಾಡಿದನು. ಆ ಭೃಗುಕುಮಾರನು ಲೋಕಸೇವಾರ್ಥವಾಗಿ ಈಗಲೂ

೧೨೨. ಕೂಡ ಮಹೇಂದ್ರವೆಂಬ ಪರ್ವತಶ್ರೇಷ್ಠದಲ್ಲಿ ಕಠಿಣವಾದ ತಪಸ್ಸನ್ನೆಸಗುತ್ತಾ ದೇವರಂತೆ ಶೋಭಿಸುತ್ತಿರುವನು.

೧೨೩. ದೇವತೆಗಳಿಗೆಲ್ಲಾ ಪ್ರಭುವೂ, ಶಾಶ್ವತನೂ ಆದ ವಿಷ್ಣುವಿನ ಜಾಮದಗ್ನ್ಯವೆಂಬ ಪ್ರಸಿದ್ಧವಾದ ಅವತಾರವೇ ಇದು.

೧೨೪. ಇಪ್ಪತ್ತನಾಲ್ಕನೇ ಯುಗದಲ್ಲಿ ಅದೇ ಪ್ರಭುವು ಪದ್ಮದಂತೆ ಕಣ್ಣುಗಳುಳ್ಳ ದಶರಥಪುತ್ರನಾಗಿ ಅವತಾರಮಾಡಿದನು. ವಿಶ್ವಾಮಿತ್ರಮಹರ್ಷಿಯು ಈ ರಾಮಚಂದ್ರನಿಂದ ಕೃತಾರ್ಥನಾದನು.

ಕೃತ್ವಾತ್ಮಾನಂ ಮಹಾಬಾಹುಶ್ಚತುರ್ಧಾ ಪ್ರಭುರೀಶ್ವರಃ ।
ಲೋಕೇ ರಾಮ ಇತಿ ಖ್ಯಾತಸ್ತೇಜಸಾ ಭಾಸ್ಕರೋಪಮಃ ॥ ೧೨೫ ॥

ಪ್ರಸಾದನಾರ್ಥಂ ಲೋಕಸ್ಯ ರಕ್ಷಸಾಂ ನಿಗ್ರಹಾಯ ಚ ।
ಧರ್ಮಸ್ಯ ಚ ವಿವೃದ್ಧ್ಯರ್ಥಂ ಜಜ್ಞೇ ತತ್ರ ಮಹಾಯಶಾಃ ॥ ೧೨೬ ॥

ತಮಪ್ಯಾಹುರ್ಮನುಷ್ಯೇಂದ್ರಂ ಸರ್ವಭೂತಹಿತೇ ರತಂ ।
ಯಃ ಸಮಾಃ ಸರ್ವಧರ್ಮಜ್ಞಶ್ಚತುರ್ದಶ ವನೇಽವಸತ್ ॥ ೧೨೭ ॥

ಲಕ್ಷ್ಮಣಾನುಚರೋ ರಾಮಃ ಸರ್ವಭೂತಹಿತೇ ರತಃ ।
ಚತುರ್ದಶ ವನೇ ತಪ್ತ್ವಾ ತಪೋ ವರ್ಷಾಣಿ ರಾಘವಃ ॥ ೧೨೮ ॥

ರೂಪಿಣೀ ತಸ್ಯ ಪಾರ್ಶ್ವಸ್ಥಾ ಸೀತೇತಿ ಪ್ರಥಿತಾ ಜನೇ ।
ಪೂರ್ವೋದಿತಾ ತು ಯಾ ಲಕ್ಷ್ಮೀರ್ಭರ್ತಾರಮನುಗಚ್ಛತಿ ॥ ೧೨೯ ॥

---

೧೨೫-೧೨೬. ತೇಜಸ್ಸಿನಲ್ಲಿ ಸೂರ್ಯನಿಗೆ ಎಣೆಯಾಗಿದ್ದ ಮಹಾಪ್ರಭುವು ತನ್ನನ್ನು ನಾಲ್ಕುರೂಪವಾಗಿ ವಿಂಗಡಿಸಿಕೊಂಡು, ಲೋಕಕಲ್ಯಾಣಕ್ಕೋಸ್ಕರ ವಾಗಿಯೂ, ರಾಕ್ಷಸರನ್ನು ನಿಗ್ರಹಿಸುವುದಕ್ಕಾಗಿಯೂ, ಧರ್ಮವನ್ನು ಅಭಿವೃದ್ಧಿ ಗೊಳಿಸುವುದಕ್ಕಾಗಿಯೂ, ದಶರಥಪುತ್ರನಾಗಿ ಜನಿಸಿ ರಾಮನೆಂಬುದಾಗಿ ಜಗತ್ತಿನಲ್ಲಿ ಪ್ರಖ್ಯಾತನಾದನು.

೧೨೭. ಆತನನ್ನು ಸಕಲಪ್ರಾಣಿಗಳ ಹಿತವನ್ನೂ ನೆರವೇರಿಸುವವನೆಂಬುದಾಗಿ ಹೊಗಳುವರು. ಎಲ್ಲ ಧರ್ಮಗಳನ್ನೂ ಬಲ್ಲ ರಾಮಚಂದ್ರನು ಹದಿನಾಲ್ಕು ವರ್ಷಗಳಕಾಲ ಕಾಡಿನಲ್ಲಿ ವಾಸಮಾಡಿದನು.

೧೨೮. ಸರ್ವಹಿತನಿರತನಾದ ರಾಮನು ತನ್ನನ್ನು ಹಿಂಬಾಲಿಸಿ ಬಂದ ಲಕ್ಷ್ಮಣನೊಡನೆ ಹದಿನಾಲ್ಕುವರ್ಷಗಳು ತಪಸ್ಸನ್ನು ಆಚರಿಸಿದನು.

೧೨೯. ಆ ಪರಮಪುರುಷನನ್ನು ಎಂದಿಗೂ ಎಡಬಿಡದೆ ಇರುತ್ತಿದ್ದ ಲಕ್ಷ್ಮಿಯು, ಈಗ ಸೀತೆಯೆಂಬುದಾಗಿ ಜನರಲ್ಲೆಲ್ಲಾ ಪ್ರಖ್ಯಾತಳಾಗಿ, ತನ್ನ ರೂಪಾತಿಶಯದಿಂದ ಮೆರೆಯುತ್ತಾ ಶ್ರೀರಾಮನ ಪಾರ್ಶ್ವದಲ್ಲಿಯೇ ಇದ್ದು ಆತನನ್ನು ಹಿಂಬಾಲಿಸಿದಳು.

ಜನಸ್ಥಾನೇ ವಸನ್ಕಾರ್ಯಂ ತ್ರಿದಶಾನಾಂ ಚಕಾರ ಸಃ ।
ತಸ್ಯಾಪಕಾರಿಣಂ ಕ್ರೂರಂ ಪೌಲಸ್ತ್ಯಂ ಮನುಜರ್ಷಭಃ ॥ ೧೩೦ ॥

ಸೀತಾಯಾಃ ಪದಮನ್ವಿಚ್ಛನ್ನಿ ಜಘಾನ ಮಹಾಯಶಾಃ ।
ದೇವಾಸುರಗಣಾನಾಂ ಚ ಯಕ್ಷರಾಕ್ಷಸಭೋಗಿನಾಂ ॥ ೧೩೧ ॥

ಯತ್ರಾವಧ್ಯಂ ರಾಕ್ಷಸೇಂದ್ರಂ ರಾವಣಂ ಯುಧಿ ದುರ್ಜಯಂ ।
ಯುಕ್ತಂ ರಾಕ್ಷಸಕೋಟೀಭಿರ್ನೀಲಾಂಜನಚಯೋಪಮಂ ॥ ೧೩೨ ॥

ತ್ರೈಲೋಕ್ಯದ್ರಾವಣಂ ಕ್ರೂರಂ ರಾವಣಂ ರಾಕ್ಷಸೇಶ್ವರಂ ।
ದುರ್ಜಯಂ ದುರ್ಧರಂ ದೃಪ್ತಂ ಶಾರ್ದೂಲಸನುವಿಕ್ರಮಂ ॥ ೧೩೩ ॥

ದುರ್ನಿರೀಕ್ಷ್ಯಂ ಸುರಗಣೈರ್ವರದಾನೇನ ದರ್ಪಿತಂ ।
ಜಘಾನ ಸಚಿವೈಃ ಸಾರ್ಧಂ ಸಸೈನ್ಯಂ ರಾವಣಂ ಯುಧಿ ॥ ೧೩೪ ॥

---

೧೩೦-೧೩೫. ರಾಮನು ಜನಸ್ಥಾನದಲ್ಲಿ ವಾಸಮಾಡುತ್ತಾ ದೇವತೆಗಳ ಕಾರ್ಯವನ್ನು ನೆರವೇರಿಸಿದನು. ಮಹಾ ಯಶಸ್ವಿಯೂ ಮನುಜಶ್ರೇಷ್ಠನೂ ಆದ ಶ್ರೀರಾಮಚಂದ್ರನು ಸೀತೆಯನ್ನು ಹುಡುಕುತ್ತಾ ತನಗೆ ಅಪಕಾರವನ್ನೆಸಗಿದ ಕ್ರೂರನಾದ ರಾವಣನನ್ನು ಸಂಹರಿಸಿದನು. ಆ ರಾವಣನನ್ನು ವಧಿಸಲು ದೇವತೆಗಳಿಗಾಗಲಿ, ಅಸುರರಿಗಾಗಲಿ, ಯಕ್ಷರಾಕ್ಷಸರಿಗಾಗಲಿ, ಪನ್ನಗರಿಗಾಗಲಿ ಸಾಧ್ಯವಿರಲಿಲ್ಲ. ಅವನು ನೀಲಾಂಜನಪರ್ವತದಂತೆ ಇದ್ದನು. ಆತನ ಹೆಸರನ್ನು ಕೇಳಿದರೆ ಮೂರುಲೋಕಗಳೂ ಭಯದಿಂದ ನೀರುನೀರಾಗುತ್ತಿದ್ದುವು. ಆ ರಾಕ್ಷಸೇಶ್ವರನು ಪರಾಕ್ರಮದಲ್ಲಿ ಶಾರ್ದೂಲಕ್ಕೆ ಸರಿಸಮನಾಗಿದ್ದನು. ಇಷ್ಟೇ ಅಲ್ಲದೆ ಅವನಿಗೆ ಬೇಕಾದಷ್ಟು ವರಬಲವಿತ್ತು. ಇವೆಲ್ಲ ಸೇರಿ ಅವನು ಬಹು ದರ್ಪದಿಂದ ಬೀಗುತ್ತಾ ಯಾರಿಗೂ ಗೆಲ್ಲಲಸಾಧ್ಯನಾಗಿ, ದೇವತೆಗಳೂ ಸಹ ತನ್ನನ್ನು ಕಣ್ಣೆತ್ತಿ ನೋಡಲಾರದಷ್ಟು ಮಟ್ಟಿಗೆ ಇದ್ದನು. ಈರೀತಿ ಭಾರಿ ಮೋಡದಂತೆ ತೋರುತ್ತಾ ಭಾರಿ ದೇಹವುಳ್ಳ ಆ ಮಹಾಬಲಾಢ್ಯನಾದ ರಾವಣ

ಮಹಾಭ್ರಗಣಸಂಕಾಶಂ ಮಹಾಕಾಯಂ ಮಹಾಬಲಂ ।
ರಾವಣಂ ನಿಜಘಾನಾಶು ರಾಮೋ ಭೂತಪತಿಃ ಪುರಾ ॥ ೧೩೫ ॥

ಸುಗ್ರೀವಸ್ಯ ಕೃತೇ ಯೇನ ವಾನರೇಂದ್ರೋ ಮಹಾಬಲಃ ।
ವಾಲೀ ವಿನಿಹತಃ ಸಂಖ್ಯೇ ಸುಗ್ರೀವಶ್ಚಾಭಿಷೇಚಿತಃ ॥ ೧೩೬ ॥

ಮಧೋಶ್ಚ ತನಯೋ ದೃಪ್ತೋ ಲವಣೋ ನಾಮ ದಾನವಃ ।
ಹತೋ ಮಧುವನೇ ವೀರೋ ವರಮತ್ತೋ ಮಹಾಸುರಃ ॥ ೧೩೭ ॥

ಯಜ್ಞವಿಘ್ನಕರೌ ಯೇನ ಮುನೀನಾಂ ಭಾವಿತಾತ್ಮನಾಂ ।
ಮಾರೀಚಶ್ಚ ಸುಬಾಹುಶ್ಚ ಬಲೇನ ಬಲಿನಾಂ ವರೌ ॥ ೧೩೮ ॥

ನಿಹತೌ ಚ ನಿರಾಶೌ ಚ ಕೃತೌ ತೇನ ಮಹಾತ್ಮನಾ ।
ಸಮರೇ ಯುದ್ಧಶೌಂಡೇನ ತಥಾನ್ಯೇ ಚಾಪಿ ರಾಕ್ಷಸಾಃ ॥ ೧೩೯ ॥

---

ನನ್ನು ಶ್ರೀರಾಮಚಂದ್ರನು ಅವನ ಸೇನೆಗಳೊಂದಿಗೂ, ಮಂತ್ರಿಗಳೊಡನೆಯೂ, ಯುದ್ಧದಲ್ಲಿ ಸಂಹರಿಸಿದನು.

೧೩೬. ಇವಕ್ಕೆ ಮೊದಲು ಸುಗ್ರೀವನನಸಲುವಾಗಿ ವಾನರ ಚಕ್ರವರ್ತಿಯಾಗಿದ್ದ ಮಹಾಬಲಾಢ್ಯನಾದ ವಾಲಿಯನ್ನು ಯುದ್ಧದಲ್ಲಿ ಕೊಂದು ಸುಗ್ರೀವನಿಗೆ ಪಟ್ಟಗಟ್ಟಿದನು.

೧೩೭. ಇದೂ ಅಲ್ಲದೆ ವರಬಲದಿಂದ ಕೊಬ್ಬಿ ಮೆರೆಯುತ್ತಿದ್ದ ಮಧುಪುತ್ರನಾದ ಲವಣನೆಂಬ ದಾನವನನ್ನು ಮಧುವನವೆಂಬಲ್ಲಿ ಆತನನ್ನು ಕೊಂದನು.

೧೩೮. ಮತ್ತು ಆ ಮಹಾತ್ಮನು, ಪರಿಶುದ್ಧಾಂತರಂಗರಾದ ಮಹರ್ಷಿಗಳು ಮಾಡುವ ಯಜ್ಞಯಾಗಾದಿಗಳಿಗೆ ವಿಘ್ನಮಾಡುತ್ತಿದ್ದ ಮಾರೀಚ ಸುಬಾಹುಗಳೆಂಬ ಬಲಾಢ್ಯರಾದ ರಾಕ್ಷಸರನ್ನು ಕೊಂದು ಅವರನ್ನು ನಿರಾಶರನ್ನಾಗಿ ಮಾಡಿದನು.

೧೩೯–೧೪೦. ಇದಲ್ಲದೆ ರಣಪಂಡಿತನಾದ ರಾಮನು, ಯುದ್ಧದಲ್ಲಿ ಅನೇಕ ರಾಕ್ಷಸರನ್ನು ಕೊಂದುದಲ್ಲದೆ, ಶಾಪವಶದಿಂದ ಮಹಾಭಯಂಕರವಾದ

ವಿರಾಧಶ್ಚ ಕಬಂಧಶ್ಚ ರಾಕ್ಷಸೌ ಭೀಮವಿಕ್ರಮೌ ।
ಜಘಾನ ಪುರುಷವ್ಯಾಘ್ರೋ ಗಂಧರ್ವೌ ಶಾಪಮೋಹಿತೌ ॥ ೧೪೦ ॥

ಹುತಾಶನಾರ್ಕಾಂಶುತಡಿದ್ಗುಣಾಭೈಃ
ಪ್ರತಪ್ತಜಾಂಬೂನದಚಿತ್ರಪುಂಖೈಃ ।
ಮಹೇಂದ್ರವಜ್ರಾಶನಿತುಲ್ಯಸಾರೈ
ರಿಪೂನ್ಸ ರಾಮಃ ಸಮರೇ ನಿಜಘ್ನೇ ॥ ೧೪೧ ॥

ತಸ್ಮೈ ದತ್ತಾನಿ ಶಸ್ತ್ರಾಣಿ ವಿಶ್ವಾಮಿತ್ರೇಣ ಧೀಮತಾ ।
ವಧಾರ್ಥಂ ದೇವಶತ್ರೂಣಾಂ ದುರ್ಧರ್ಷಾಣಾಂ ಸುರೈರಪಿ ॥ ೧೪೨ ॥

ವರ್ತಮಾನೇ ಮಖೇ ಯೇನ ಜನಕಸ್ಯ ಮಹಾತ್ಮನಃ ।
ಭಗ್ನಂ ಮಾಹೇಶ್ವರಂ ಚಾಪಂ ಕ್ರೀಡತಾ ಲೀಲಯಾ ಪುರಾ ॥ ೧೪೩ ॥

---

ಸಾಹಸವುಳ್ಳ ವಿರಾಧ ಮತ್ತು ಕಬಂಧ ಎಂಬ ಹೆಸರಿನಿಂದ ಪ್ರಸಿದ್ಧರಾದ ರಾಕ್ಷಸ ರಾಗಿದ್ದ ಗಂಧರ್ವರಿಬ್ಬರನ್ನು ಕೊಂದನು.

೧೪೧. ರಾಮನು ಅಗ್ನಿಯ ಜ್ವಾಲೆಯಂತೆಯೂ, ಸೂರ್ಯನ ಕಿರಣ ದಂತೆಯೂ, ಮಿಂಚಿನ ಬೆಳಕಿನಂತೆಯೂ, ಹೊಳೆಯುತ್ತಾ, ಚೆನ್ನಾಗಿ ಕಾಸಿದ ಚಿನ್ನದಿಂದ ಮಾಡಿದ ಗರಿಗಳನ್ನು ಪಡೆದು ವೇಗದಲ್ಲಿಯೂ, ಬಲದಲ್ಲಿಯೂ ಇಂದ್ರನ ವಜ್ರಾಯುಧವನ್ನೂ ಸಿಡಿಲನ್ನೂ ಮೀರಿಸುತ್ತಿದ್ದಂತಹ ತನ್ನ ಬಾಣ ಗಳಿಂದ ಶತ್ರುಗಳನ್ನು ಸಂಹಾರಮಾಡಿದನು.

೧೪೨. ರಾಮಚಂದ್ರನಿಗೆ ಮಹಾಪ್ರಾಜ್ಞನಾದ ವಿಶ್ವಾಮಿತ್ರನು, ದೇವತೆ ಗಳಿಂದಲೂ ಗೆಲ್ಲಲು ಸಾಧ್ಯವಿಲ್ಲದಂತಹ ರಾಕ್ಷಸರನ್ನು ಕೊಲ್ಲುವ ಸಲುವಾಗಿ ಶಸ್ತ್ರಾಸ್ತ್ರಗಳನ್ನು (ಕಲಿಸಿದನು).

೧೪೩. ಆ ಮಹಾನುಭಾವನು ಹಿಂದೆ ಜನಕರಾಜನ ಯಜ್ಞವು ನಡೆ ಯುತ್ತಿದ್ದಾಗ ಶಿವಧನುಸ್ಸನ್ನು ಲೀಲೆಯಿಂದಲೇ ಮುರಿದುಬಿಟ್ಟನು.

ಏತಾನಿ ಕೃತ್ವಾ ಕರ್ಮಾಣಿ ರಾಮೋ ಧರ್ಮಭೃತಾಂ ವರಃ ।
ದಶಾಶ್ವಮೇಧಾನ್ ಜಾರೂಥ್ಯಾನಾಜಹಾರ ನಿರರ್ಗಲಾನ್ ॥ ೧೪೪ ॥

ನಾಶ್ರೂಯಂತಾಶುಭಾ ವಾಚೋ ನಾಕುಲಂ ಮಾರುತೋ ವವೌ ।
ನ ವಿತ್ತಹರಣಂ ಚಾಸೀದ್ರಾಮೋ ರಾಜ್ಯಂ ಪ್ರಶಾಸತಿ ॥ ೧೪೫ ॥

ಪರಿದೇವಂತಿ ವಿಧವಾ ನಾನರ್ಥಾಶ್ಚ ಕದಾಚನ ।
ಸರ್ವಮಾಸೀಚ್ಛುಭಂ ತತ್ರ ರಾಮೋ ರಾಜ್ಯಂ ಪ್ರಶಾಸತಿ ॥ ೧೪೬ ॥

ನ ಪ್ರಾಣಿನಾಂ ಭಯಂ ಚಾಸೀಜ್ಜಲಾಗ್ನ್ಯನಿಲಘಾತಜಂ ।
ನ ಚಾಪಿ ವೃದ್ಧಾ ಬಾಲಾನಾಂ ಪ್ರೇತಕಾರ್ಯಾಣಿ ಚಕ್ರಿರೇ ॥ ೧೪೭ ॥

---

೧೪೪. ಧರ್ಮಜ್ಞರಿಗೆಲ್ಲಾ ಮೊದಲನೆಯವನೆನಿಸಿದ ಆ ಶ್ರೀರಾಮನು ಇಂತಹ ಅದ್ಭುತಕೃತ್ಯಗಳನ್ನು ಮಾಡಿ ಹತ್ತು ಅಶ್ವಮೇಧಗಳನ್ನೂ ಜಾರೂಥ್ಯಗಳನ್ನೂ ನಡೆಸಿದನು.

೧೪೫. ರಾಮಚಂದ್ರನು ರಾಜ್ಯವಾಳುತ್ತಿದ್ದಾಗ ಯಾವೆಡೆಯಲ್ಲೂ ಕೆಟ್ಟ ಮಾತುಗಳು ಕೇಳುತ್ತಿರಲಿಲ್ಲ. ಗಾಳಿಯು ಬಿರುಸಾಗಿ ಬೀಸುತ್ತಿರಲಿಲ್ಲ. ಯಾರ ಹಣವನ್ನೂ ಕಳ್ಳರು ಕದಿಯುತ್ತಿರಲಿಲ್ಲ.

೧೪೬. ಆತನ ರಾಜ್ಯಭಾರದಲ್ಲಿ ವಿಧವೆಯರು ಅತ್ತುದನ್ನು ಯಾರೂ ಅರಿಯರು. ಯಾವೊಂದು ಅನರ್ಥವೂ ಎಲ್ಲಿಯೂ ಯಾವಾಗಲೂ ಜರುಗಲಿಲ್ಲ. ಎಲ್ಲವೂ ಕೂಡ ಶುಭವಾಗಿ ಇತ್ತು.

೧೪೭. ಆತನ ಆಡಳಿತದಲ್ಲಿ ಪ್ರಾಣಿಗಳಿಗೆ ನೀರಿನಿಂದಲೂ, ಬೆಂಕಿಯಿಂದಲೂ, ಗಾಳಿಯಿಂದಲೂ ಅಪಘಾತವಾಗುವುದೆಂಬ ಹೆದರಿಕೆಯಿರಲಿಲ್ಲ. ಮುದುಕರಾದವರು ತಮ್ಮ ಮಕ್ಕಳಿಗೆ ಅಂತ್ಯಸಂಸ್ಕಾರವನ್ನು ನಡೆಸುವ ಕರುಣಾಜನಕಪ್ರಸಂಗವು ಅಲ್ಲಿ ನಡೆಯುತ್ತಿರಲಿಲ್ಲ.

ಬ್ರಹ್ಮಚರ್ಯಪರಂ ಕ್ಷತ್ರಂ ವಿಶಸ್ತು ಕ್ಷತ್ರಿಯೇ ರತಾಃ ।
ಶೂದ್ರಾಶ್ಚೈವ ಹಿ ವರ್ಣಾಂಸ್ತ್ರೀನ್ ಶುಶ್ರೂಷಂತ್ಯನಹಂಕೃತಾಃ ॥ ೧೪೮ ॥

ನಾರ್ಯೋ ನಾತ್ಯಚರನ್ಭರ್ತ್ವ್ಯನ್ನಾರ್ಯೋ ನಾತ್ಯಚರತ್ಪತಿಃ ।
ಸರ್ವಮಾಸೀಜ್ಜಗದ್ದಾಂತಂ ನಿರ್ದಸ್ಯುರಭವನ್ಮಹೀ ॥ ೧೪೯ ॥

ರಾಮ ಏಕೋಽಭವದ್ಭರ್ತಾ ರಾಮಃ ಪಾಲಯಿತಾಭವತ್ ।
ಆಸನ್ವರ್ಷಸಹಸ್ರಾಣಿ ತಥಾ ಪುತ್ರಸಹಸ್ರಿಣಃ ॥ ೧೫೦ ॥

ಅರೋಗಾಃ ಪ್ರಾಣಿನಶ್ಚಾಸನ್ರಾಮೇ ರಾಜ್ಯಂ ಪ್ರಶಾಸತಿ ।
ದೇವತಾನಾಮೃಷೀಣಾಂ ಚ ಮನುಷ್ಯಾಣಾಂ ಚ ಸರ್ವಶಃ ॥ ೧೫೧ ॥

ಪೃಥಿವ್ಯಾಂ ಸಮವಾಯೋಽಭೂದ್ರಾಮೇ ರಾಜ್ಯಂ ಪ್ರಶಾಸತಿ ।
ಗಾಥಾಮಪ್ಯತ್ರ ಗಾಯಂತಿ ಯೇ ಪುರಾಣವಿದೋ ಜನಾಃ ॥ ೧೫೨ ॥

---

೧೪೮. ಮತ್ತು ಬ್ರಾಹ್ಮಣಾದಿ ಚತುರ್ವರ್ಣಗಳು ಅಹಂಭಾವವಿಲ್ಲದೆ ಇರುತ್ತಿದ್ದುವು. ಬ್ರಾಹ್ಮಣರನ್ನು ಕ್ಷತ್ರಿಯರು ಸೇವಿಸುತ್ತಲೂ, ಕ್ಷತ್ರಿಯರನ್ನು ವೈಶ್ಯರು ಅನುವರ್ತನೆ ಮಾಡುತ್ತಲೂ, ಮೇಲ್ಕಂಡ ಮೂರುವರ್ಣದವರನ್ನು ಶೂದ್ರರು ಶುಶ್ರೂಷೆಮಾಡುತ್ತಲೂ ಇದ್ದರು.

೧೪೯. ಸ್ತ್ರೀಯರು ತಮ್ಮ ಪತಿಗಳನ್ನೂ, ಪುರುಷರು ತಮ್ಮ ಸ್ತ್ರೀಯರನ್ನೂ ಬಿಟ್ಟು ಅನ್ಯತ್ರ ವ್ಯಭಿಚರಿಸುತ್ತಿರಲಿಲ್ಲ. ಆಗ ಪ್ರಪಂಚವೆಲ್ಲವೂ ಸುಶಿಕ್ಷಿತವಾಗಿ ಇತ್ತು. ಮತ್ತು ಕಳ್ಳಕಾಕರರ ಹೆಸರೇ ಇರಲಿಲ್ಲ.

೧೫೦. ರಾಮನೊಬ್ಬನೇ ಎಲ್ಲರಿಗೂ ಪ್ರಭುವಾಗಿದ್ದನು. ರಾಮನೇ ಎಲ್ಲರನ್ನೂ ಪರಿಪಾಲಿಸುತ್ತಿದ್ದನು. ಆತನ ರಾಜ್ಯದಲ್ಲಿ ಪ್ರತಿಯೊಬ್ಬನೂ ಸಾವಿರವರ್ಷಗಳು ಬದುಕುತ್ತಿದ್ದನು. ಒಬ್ಬೊಬ್ಬನಿಗೂ ಸಾವಿರ ಮಕ್ಕಳುಗಳಿರುತ್ತಿದ್ದುವು.

೧೫೧-೧೫೨. ರಾಮನು ರಾಜ್ಯಭಾರಮಾಡುತ್ತಿದ್ದಾಗ ಪ್ರಾಣಿಗಳಿಗೆ ರೋಗವೆಂಬುದೇ ಇರಲಿಲ್ಲ. ಆ ರಾಜ್ಯದಲ್ಲಿ ದೇವತೆಗಳೂ, ಋಷಿಗಳೂ, ಮನುಷ್ಯರೂ ಗುಂಪಾಗಿ ಒಟ್ಟಿಗೆ ಇರುತ್ತಿದ್ದರು. ಪುರಾಣವನ್ನು ಬಲ್ಲ ಹಿರಿಯರು ಈ ವಿಷಯದಲ್ಲಿ ಗಾದೆಯನ್ನು ಹೇಳುವರು.

**ರಾಮೇ ನಿಬದ್ಧತತ್ತ್ವಾರ್ಥಾ ಮಾಹಾತ್ಮ್ಯಂ ತಸ್ಯ ಧೀಮತಃ ।**
**ಶ್ಯಾಮೋ ಯುವಾ ಲೋಹಿತಾಕ್ಷೋ ದೀಪ್ತಾಸ್ಯೋ ಮಿತಭಾಷಿತಃ ॥ ೧೫೩ ॥**

**ಆಜಾನುಬಾಹುಃ ಸುಮುಖಃ ಸಿಂಹಸ್ಕಂಧೋ ಮಹಾಭುಜಃ ।**
**ದಶ ವರ್ಷಸಹಸ್ರಾಣಿ ರಾಮೋ ರಾಜ್ಯಮಕಾರಯತ್ ॥ ೧೫೪ ॥**

**ಋಕ್ಸಾಮಯಜುಷಾಂ ಘೋಷೋ ಜ್ಯಾಘೋಷಶ್ಚ ಮಹಾತ್ಮನಃ ।**
**ಅವ್ಯುಚ್ಛಿನ್ನೋಽಭವದ್ರಾಷ್ಟ್ರೇ ದೀಯತಾಂ ಭುಜ್ಯತಾಮಿತಿ ॥ ೧೫೫ ॥**

**ಸತ್ತ್ವವಾನ್ಗುಣಸಂಪನ್ನೋ ದೀಪ್ಯಮಾನಃ ಸ್ವತೇಜಸಾ ।**
**ಅತಿಚಂದ್ರಂ ಚ ಸೂರ್ಯಂ ಚ ರಾಮೋ ದಾಶರಥಿರ್ಬಭೌ ॥ ೧೫೬ ॥**

---

೧೫೩-೧೫೪. ರಾಮನಲ್ಲೇ ತಮ್ಮ ಮನಸ್ಸನ್ನು ನೆಲೆಗೊಳಿಸಿರುವ ಮಹನೀಯರು ಆತನ ಮಾಹಾತ್ಮ್ಯವನ್ನು ವರ್ಣಿಸುವರು. ರಾಮನು ತುಂಬು ಫ್ರಾಯದವನು, ಮಿತಭಾಷಿ, ಶರೀರವು ನೀಲವರ್ಣದಿಂದ ರಂಜಿಸುತ್ತಿತ್ತು. ಮತ್ತು ಕಣ್ಣುಗಳು ಸ್ವಲ್ಪ ಕೆಂಪಗೂ, ಮುಖವು ತೇಜಃಪೂರ್ಣವಾಗಿಯೂ ಇತ್ತು. ಕೈಗಳು ಮಂಡಿಯನ್ನು ಮುಟ್ಟುತ್ತಿದ್ದುವು. ನಸುನಗುತ್ತಿರುವ ಮುಖ, ಸಿಂಹದಂತೆ ಉಬ್ಬಿರುವ ಹೆಗಲು, ನಿಡಿದಾದ ತೋಳು ಅವನ ಅಂದವನ್ನು ಹೆಚ್ಚಿಸುತ್ತಿದ್ದುವು. ಇಂತಹ ಶ್ರೀರಾಮಚಂದ್ರನು ಹತ್ತುಸಾವಿರ ವರ್ಷಗಳಕಾಲ ರಾಜ್ಯವನ್ನಾಳಿದನು.

೧೫೫. ರಾಜ್ಯದಲ್ಲಿ ಎಲ್ಲೆಲ್ಲಿಯೂ, ಋಕ್ಕು, ಯಜುಸ್ಸು, ಸಾಮ ಈ ವೇದಗಳ ಘೋಷವಾಗಲೀ, ಬಿಲ್ಲಿನ ಹೆದೆಯ ಝೇಂಕಾರವಾಗಲೀ ಕೇಳಿ ಬರುತ್ತಿತ್ತು. ಎಲ್ಲೆಲ್ಲಿಯೂ ಕೊಡು ತಿನ್ನು ಎಂಬ ಮಾತು ತಡೆಯಿಲ್ಲದೆ ಕೇಳಿ ಬರುತ್ತಿತ್ತು.

೧೫೬. ಸತ್ತ್ವಶಾಲಿಯೂ, ಗುಣಸಂಪನ್ನನೂ ಆದ ದಶರಥಪುತ್ರನಾದ ಶ್ರೀರಾಮಚಂದ್ರನು ತನ್ನ ತೇಜಸ್ಸಿನಿಂದ ಸೂರ್ಯಚಂದ್ರರಿಗಿಂತಲೂ ಮಿಗಿಲಾಗಿ ಪ್ರಕಾಶಿಸುತ್ತಾ ಇದ್ದನು.

ಈಜೇ ಕ್ರತುಶತೈಃ ಪುಣ್ಯೈಃ ಸಮಾಪ್ತವರದಕ್ಷಿಣೈಃ ।
ಹಿತ್ವಾಯೋಧ್ಯಾಂ ದಿವಂ ಯಾತೋ ರಾಘವೋ ಹಿ ಮಹಾಬಲಃ ॥ ೧೫೭ ॥

ಏವಮೇವ ಮಹಾಬಾಹುರಿಕ್ಷ್ವಾಕುಕುಲನಂದನಃ ।
ರಾವಣಂ ಸಗಣಂ ಹತ್ವಾ ದಿವಮಾಚಕ್ರಮೇ ವಿಭುಃ ॥ ೧೫೮ ॥

ಅಪರಃ ಕೇಶವಸ್ಯಾಯಂ ಪ್ರಾದುರ್ಭಾವೋ ಮಹಾತ್ಮನಃ ।
ವಿಖ್ಯಾತೋ ಮಾಥುರೇ ಕಲ್ಪೇ ಸರ್ವಲೋಕಹಿತಾಯ ವೈ ॥ ೧೫೯ ॥

ಯತ್ರ ಶಾಲ್ವಂ ಚ ಚೈದ್ಯಂ ಚ ಕಂಸಂ ದ್ವಿವಿದಮೇವ ಚ ।
ಅರಿಷ್ಟಂ ವೃಷಭಂ ಕೇಶಿಂ ಪೂತನಾಂ ದೈತ್ಯದಾರಿಕಾಂ ॥ ೧೬೦ ॥

ನಾಗಂ ಕುವಲಯಾಪೀಡಂ ಚಾಣೂರಂ ಮುಷ್ಟಿಕಂ ತಥಾ ।
ದೈತ್ಯಾನ್ಮಾನುಷದೇಹೇನ ಸೂದಯಾಮಾಸ ವೀರ್ಯವಾನ್ ॥ ೧೬೧ ॥

---

೧೫೭. ಮಹಾಬಲಶಾಲಿಯಾದ ರಾಘವನು ಪಾವನವಾದ ನೂರಾರು ಯಜ್ಞಯಾಗಗಳನ್ನಾಚರಿಸಿ ಬೇಕಾದಂತಹ ದಕ್ಷಿಣೆಗಳನ್ನಿತ್ತನು. ಅನಂತರ ಅಯೋಧ್ಯೆಯನ್ನು ಬಿಟ್ಟು ತನ್ನ ಸ್ವಸ್ಥಾನವನ್ನು ಸೇರಿದನು.

೧೫೮. ಈರೀತಿಯಾಗಿ ಇಕ್ಷ್ವಾಕುವಂಶವರ್ಧನನಾದ ಮಹಾಬಾಹುವು ಸಪರಿವಾರನಾದ ರಾವಣನನ್ನು ಸಂಹರಿಸಿ ತನ್ನ ದಿವ್ಯಧಾಮವನ್ನು ಸೇರಿದನು.

೧೫೯. ಇದಾದನಂತರವೇ ಶ್ರೀಹರಿಯು ಸಕಲಲೋಕಕ್ಷೇಮಕ್ಕಾಗಿ ಮಾಥುರಕಲ್ಪದಲ್ಲಿ ಕೇಶವನಾಗಿ (ಶ್ರೀಕೃಷ್ಣ) ಅವತರಿಸಿದನು.

೧೬೦-೧೬೧. ಆ ವೀರ್ಯಶಾಲಿಯು ಮನುಷ್ಯರಂತೆ ವೇಷ ತಾಳಿದ್ದ ದೈತ್ಯರಾದ ಶಾಲ್ವನನ್ನೂ, ಶಿಶುಪಾಲನನ್ನೂ, ಕಂಸನನ್ನೂ ದ್ವಿವಿದನನ್ನೂ, ವೃಷಭಾಕೃತಿಯ ಅರಿಷ್ಟನನ್ನೂ, ಕೇಶಿಯನ್ನೂ, ಪೂತನೆಯೆಂಬ ರಾಕ್ಷಸಿಯನ್ನೂ ಕುವಲಯಾಪೀಡವೆಂಬ ಆನೆಯನ್ನೂ, ಚಾಣೂರ ಮುಷ್ಟಿಕರೆಂಬ ಜಟ್ಟಿಗಳನ್ನೂ ಸಂಹರಿಸಿದನು.

ಛಿನ್ನಂ ಬಾಹುಸಹಸ್ರಂ ಚ ಬಾಣಸ್ಯಾದ್ಭುತಕರ್ಮಣಃ ।
ನರಕಶ್ಚ ಹತಃ ಸಂಖ್ಯೇ ಯವನಶ್ಚ ಮಹಾಬಲಃ ॥ ೧೬೨ ॥

ಕೃತಾನಿ ಚ ಮಹೀಪಾನಾಂ ಸರ್ವರತ್ನಾನಿ ತೇಜಸಾ ।
ದುರಾಚಾರಾಶ್ಚ ನಿಹತಾಃ ಪಾರ್ಥಿವಾ ಯೇ ಮಹೀತಲೇ ॥ ೧೬೩ ॥

ಏಷ ಲೋಕಹಿತಾರ್ಥಾಯ ಪ್ರಾದುರ್ಭಾವೋ ಮಹಾತ್ಮನಃ ।
ಕಲ್ಕೀ ವಿಷ್ಣುಯಶಾ ನಾಮ ಶಂಭಲಗ್ರಾಮಸಂಭವಃ ॥ ೧೬೪ ॥

ಸರ್ವಲೋಕಹಿತಾರ್ಥಾಯ ಭೂಯೋ ದೇವೋ ಮಹಾಯಶಾಃ ।
ಏತೇ ಚಾನ್ಯೇ ಚ ಬಹವೋ ದಿವ್ಯಾ ದೇವಗಣೈರ್ವೃತಾಃ ॥ ೧೬೫ ॥

ಪ್ರಾದುರ್ಭಾವಾಃ ಪುರಾಣೇಷು ಗೀಯಂತೇ ಬ್ರಹ್ಮವಾದಿಭಿಃ ।
ಯತ್ರ ದೇವಾ ವಿಮುಹ್ಯಂತಿ ಪ್ರಾದುರ್ಭಾವಾನುಕೀರ್ತನೇ ॥ ೧೬೬ ॥

---

೧೬೨. ಅಮಾನುಷವಾದ ಕೆಲಸಗಳನ್ನು ನಡೆಸುತ್ತಿದ್ದ ಬಾಣಾಸುರನ ಕೈಗಳನ್ನು ಕತ್ತರಿಸಿದುದಲ್ಲದೆ ನರಕಾಸುರನನ್ನೂ, ಕಾಲಯವನನ್ನೂ ಸಂಹಾರ ಮಾಡಿದನು.

೧೬೩. ಮತ್ತು ಅವನು ದುಷ್ಟರಾಗಿದ್ದ ಅರಸರು ಯಾರಾರಿದ್ದರೋ ಅವರ ಬಳಿಯಲ್ಲಿದ್ದ ಎಲ್ಲ ಬಗೆಯ ರತ್ನಗಳನ್ನೂ ಕಸಿದುಕೊಂಡು ಅವರನ್ನು ನಾಶಮಾಡಿದನು.

೧೬೪-೧೬೬. ಇದೀಗ ಆ ಮಹಾತ್ಮನ ಲೋಕಹಿತಾರ್ಥವಾದ ಕೃಷ್ಣಾವತಾರವು. ಮುಂದೆ ಅದೇ ಪರಮಾತ್ಮನು ಲೋಕಕ್ಷೇಮಕ್ಕಾಗಿ ಶಂಭಲವೆಂಬ ಗ್ರಾಮದಲ್ಲಿ ವಿಷ್ಣುಯಶಸ್ಸು ಎಂಬ ಹೆಸರಿನಿಂದ ಅವತರಿಸಿ, ಕರ್ಕವನ್ನು (ಬಿಳಿಯ ಕುದುರೆ) ಏರಿದುದರಿಂದ ಕಲ್ಕೀ ಎಂದೇ ಪ್ರಸಿದ್ಧನಾಗುವನು. ಈಗ ಹೇಳಿದ ಅವತಾರಗಳಲ್ಲದೆ ಇನ್ನೂ ಅನೇಕ ಇತರ ದಿವ್ಯವಾದ (ದೇವತಾರೂಪದಲ್ಲಿ ಮಾಡಿದ) ಅವತಾರಗಳೆಲ್ಲವನ್ನೂ ವಿವರಿಸಲು ದೇವತೆಗಳಿಗೂ ಸಾಧ್ಯವಿಲ್ಲ. ಮಂಕು ಕವಿದಂತಾಗುವುದು-

ಪುರಾಣಂ ವರ್ತತೇ ಯತ್ರ ವೇದಶ್ರುತಿಸಮಾಹಿತಂ ।
ಏತದುದ್ದೇಶಮಾತ್ರೇಣ ಪ್ರಾದುರ್ಭಾವಾನುಕೀರ್ತನಂ ॥ ೧೬೭ ॥

ಕೀರ್ತಿತಂ ಕೀರ್ತನೀಯಸ್ಯ ಸರ್ವಲೋಕಗುರೋರ್ವಿಭೋಃ ।
ಪ್ರೀಯಂತೇ ಪಿತರಸ್ತಸ್ಯ ಪ್ರಾದುರ್ಭಾವಾನುಕೀರ್ತನಾತ್ ॥ ೧೬೮ ॥

ವಿಷ್ಣೋರಮಿತವೀರ್ಯಸ್ಯ ಯಃ ಶೃಣೋತಿ ಕೃತಾಂಜಲಿಃ ॥ ೧೬೯ ॥

ಏತಾಶ್ಚ ಯೋಗೇಶ್ವರಯೋಗಮಾಯಾಃ
ಶ್ರುತ್ವಾ ನರೋ ಮುಚ್ಯತಿ ಸರ್ವಪಾಪೈಃ ।
ಋದ್ಧಿಂ ಸಮೃದ್ಧಿಂ ವಿಪುಲಾಂಶ್ಚ ಭೋಗಾ-
ನ್ಪ್ರಾಪ್ನೋತಿ ಶೀಘ್ರಂ ಭಗವತ್ಪ್ರಸಾದಾತ್ ॥ ೧೭೦ ॥

---

೧೬೭. ಈ ಅವತಾರಗಳ ವಿಷಯದಲ್ಲಿ ವೇದಕ್ಕೆ ಸರಿಸಮವಾದ ಪ್ರಾಮಾಣ್ಯವುಳ್ಳ ಪುರಾಣಗಳಿರುವುವು. ಆದುದರಿಂದಲೇ ಈ ಅವತಾರಗಳನ್ನು ಸ್ಥೂಲವಾಗಿ ತಿಳಿಸಿದರು.

೧೬೮-೧೬೯. ಎಲ್ಲ ಲೋಕಗಳಿಗೂ ಪ್ರಭುವೂ, ಸರ್ವವ್ಯಾಪಕನೂ ಪುಣ್ಯಶ್ಲೋಕನೂ, ಅಪರಿಮಿತಪರಾಕ್ರಮಶಾಲಿಯೂ ಆದ ವಿಷ್ಣುವಿನ ಅವತಾರ ಚರಿತಗಳನ್ನು ಯಾವಾತನು ಭಕ್ತಿಯಿಂದ ಬದ್ಧಾಂಜಲಿಯಾಗಿ ಶ್ರವಣಮಾಡುವನೋ ಅವನ ಪಿತೃಗಳು ಸುಪ್ರೀತರಾಗುವರು.

೧೭೦. ಈ ರೀತಿ ವಿವರಿಸಿದ ಯೋಗೇಶ್ವರನ ಯೋಗಮಾಯೆಗಳನ್ನು ಕೇಳಿದ ಮಾನವನು ಎಲ್ಲ ಪಾಪಗಳಿಂದಲೂ ಮುಕ್ತನಾಗುವನಲ್ಲದೆ, ಭಗವಂತನ ಅನುಗ್ರಹದಿಂದ ಐಶ್ವರ್ಯವನ್ನೂ ಅಭಿವೃದ್ಧಿಯನ್ನೂ ಅನೇಕವಾದ ಭೋಗಗಳನ್ನೂ ಬೇಗನೆ ಹೊಂದುವನು.

ಏವಂ ಮಯಾ ಮುನಿಶ್ರೇಷ್ಠಾ ವಿಷ್ಣೋರಮಿತತೇಜಸಃ ।
ಸರ್ವಪಾಪಹರಾಃ ಪುಣ್ಯಾಃ ಪ್ರಾದುರ್ಭಾವಾಃ ಪ್ರಕೀರ್ತಿತಾಃ ॥ ೧೭೧ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ವಿಷ್ಣೋಃ ಪ್ರಾದುರ್ಭಾವಾನು-
ಕೀರ್ತನಂ ನಾಮ ತ್ರಯೋದಶಾಧಿಕದ್ವಿಶತತಮೋಽಧ್ಯಾಯಃ

---

೧೭೧. ಎಲೈ ಮುನಿಶ್ರೇಷ್ಠರಿರಾ! ಈರೀತಿಯಾಗಿ ನಾನು ಅಪರಿಮಿತ ತೇಜಶ್ಶಾಲಿಯಾದ ವಿಷ್ಣುವಿನ ಸಕಲಪಾಪಪರಿಹಾರಕವೂ, ಪುಣ್ಯಕರವೂ ಆದ ಅವತಾರಗಳನ್ನು ನಿಮಗೆ ತಿಳಿಸಿದೆನು ಎಂದನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ .ಭಗವತಾತಾರವರ್ಣನವೆಂಬ ಇನ್ನೂರಹದಿ
ಮೂರನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಬ್ರಾಹ್ಮೇ ಮಹಾಪುರಾಣೇ

## ಚತುರ್ದಶಾಧಿಕದ್ವಿಶತತಮೋಽಧ್ಯಾಯಃ

---

॥ ಮುನಯ ಊಚುಃ ॥

ನ ತೃಪ್ತಿಮಧಿಗಚ್ಛಾಮಃ ಪುಣ್ಯಧರ್ಮಾಮೃತಸ್ಯ ಚ ।
ಮುನೇ ತ್ವನ್ಮುಖಗೀತಸ್ಯ ತಥಾ ಕೌತೂಹಲಂ ಹಿ ನಃ ॥ ೧ ॥

ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಂ ಕರ್ಮಣೋ ಗತಿಂ ।
ವೇತ್ಸಿ ಸರ್ವಂ ಮುನೇ ತೇನ ಪೃಚ್ಛಾಮಸ್ತ್ವಾಂ ಮಹಾಮತಿಂ ॥ ೨ ॥

---

### ಇನ್ನೂರಹದಿನಾಲ್ಕನೆಯ ಅಧ್ಯಾಯವು

೧. ಶೌನಕಾಗಿ ಮಹರ್ಷಿಗಳು ವ್ಯಾಸಮುನೀಂದ್ರನನ್ನು ಕುರಿತು ಓ ಮಹಾತ್ಮ! ನಿನ್ನ ಮುಖದಿಂದ ಹೊರಟು ಬರುತ್ತಿರುವ ಪುಣ್ಯತಮವಾದ ಧರ್ಮವೆಂಬ ಅಮೃತವನ್ನು ಸವಿದುಸವಿದು ನಮಗೆ ತೃಪ್ತಿಯೇ ಉಂಟಾಗ ಲಿಲ್ಲ. ಅದಕ್ಕೆ ಬದಲಾಗಿ ನಮ್ಮ ಕುತೂಹಲವು ಮತ್ತಷ್ಟು ಹೆಚ್ಚು ತ್ತಿರುವುದು.

೨. ಎಲೈ ಮುನೀಂದ್ರನೇ! ನೀನು ಸಕಲಭೂತಗಳ ಉತ್ಪತ್ತಿಯನ್ನೂ ನಾಶವನ್ನೂ, ಮಾಡಿದ ಕರ್ಮಗಳಿಗೆ ಉಂಟಾಗತಕ್ಕ ಫಲವನ್ನೂ ಚೆನ್ನಾಗಿ ತಿಳಿದಿರುವೆ. ಆದುದರಿಂದಲೇ ಮಹಾಪ್ರಾಜ್ಞನಾದ ನಿನ್ನನ್ನು ನಾವು ಕೇಳುತ್ತಿರುವೆವು.

ಶ್ರೂಯತೇ ಯಮಲೋಕಸ್ಯ ಮಾರ್ಗಃ ಪರಮದುರ್ಗಮಃ ।
ದುಃಖಕ್ಲೇಶಕರಃ ಶಶ್ವತ್ಸರ್ವಭೂತಭಯಾವಹಃ ॥ ೩ ॥

ಕಥಂ ತೇನ ನರಾ ಯಾಂತಿ ಮಾರ್ಗೇಣ ಯಮಸಾದನಂ ।
ಪ್ರಮಾಣಂ ಚೈವ ಮಾರ್ಗಸ್ಯ ಬ್ರೂಹಿ ನೋ ವದತಾಂ ವರ ॥ ೪ ॥

ಮುನೇ ಪೃಚ್ಛಾಮ ಸರ್ವಜ್ಞ ಬ್ರೂಹಿ ಸರ್ವಮಶೇಷತಃ ।
ಕಥಂ ನರಕದುಃಖಾನಿ ನಾಪ್ನುವಂತಿ ನರಾನ್ಮುನೇ ॥ ೫ ॥

ಕೇನೋಪಾಯೇನ ದಾನೇನ ಧರ್ಮೇಣ ನಿಯಮೇನ ಚ ।
ಮಾನುಷಸ್ಯ ಚ ಯಾಮ್ಯಸ್ಯ ಲೋಕಸ್ಯ ಕಿಯದಂತರಂ ॥ ೬ ॥

---

೩. ಯಮಲೋಕಮಾರ್ಗವು ಅತಿಗಹನವಾದುದೆಂದೂ, ದುಃಖವನ್ನೂ ಸಂಕಟವನ್ನೂ ಉಂಟುಮಾಡುವುದೆಂದೂ, ಎಲ್ಲ ಪ್ರಾಣಿಗಳಿಗೂ ಭಯಂಕರವಾದುದೆಂದೂ ನಾವು ಕೇಳುತ್ತೇವೆ.

೪. ಓ ಮುನಿಶ್ರೇಷ್ಠ ! ಆ ಮಾರ್ಗದಿಂದ ಮನುಷ್ಯರು ಯಮಲೋಕಕ್ಕೆ ಹೋಗುವುದು ಹೇಗೆ ? ಆ ಮಾರ್ಗದ ಪ್ರಮಾಣವಾದರೂ ಏನು ? ಇದೆಲ್ಲವನ್ನೂ ನಮಗೆ ತಿಳಿಸು.

೫. ಎಲ್ಲವನ್ನೂ ತಿಳಿದಿರುವ ಓ ಮುನೀಂದ್ರ ! ನಿನ್ನನ್ನು ನಾವು ಕೇಳುತ್ತೇವೆ. ಸಮಗ್ರನಾಗಿ ಎಲ್ಲವನ್ನೂ ತಿಳಿಸು. ನರಕದಲ್ಲಿ ಆಗುವ ದುಃಖಗಳು ಮನುಷ್ಯರಿಗೆ ಆಗದಿರುವುದು ಹೇಗೆ ?

೬. ಆರೀತಿಯಾಗಲು ಯಾವ ಉಪಾಯವಿರುವುದು ? ಏನು, ದಾನವೇ? ಧರ್ಮವೇ ? ನಿಷ್ಠೆಯೇ ? ಮಾನವಲೋಕಕ್ಕೂ ಯಮಲೋಕಕ್ಕೂ ನಡುವೆ ಇರುವ ದೂರವೆಷ್ಟು ?

ಕಥಂ ಚ ಸ್ವರ್ಗತಿಂ ಯಾಂತಿ ನರಕಂ ಕೇನ ಕರ್ಮಣಾ ।
ಸ್ವರ್ಗಸ್ಥಾನಾನಿ ಕಿಯಂತಿ ಕಿಯಂತಿ ನರಕಾಣಿ ಚ ॥ ೭ ॥

ಕಥಂ ಸುಕೃತಿನೋ ಯಾಂತಿ ಕಥಂ ದುಷ್ಕೃತಕಾರಿಣಃ ।
ಕಿಂ ರೂಪಂ ಕಿಂ ಪ್ರಮಾಣಂ ವಾ ಕೋ ವರ್ಣಸ್ತ್ವೂಭಯೋರಪಿ ।
ಜೀವಸ್ಯ ನೀಯಮಾನಸ್ಯ ಯಮಲೋಕಂ ಬ್ರವೀಹಿ ನಃ ॥ ೮ ॥

॥ ವ್ಯಾಸ ಉವಾಚ ॥

ಶೃಣುಧ್ವಂ ಮುನಿಶಾರ್ದೂಲಾ ವದತೋ ಮಮ ಸುವ್ರತಾಃ ।
ಸಂಸಾರಚಕ್ರಮಜರಂ ಸ್ಥಿತಿರ್ಯಸ್ಯ ನ ವಿದ್ಯತೇ ॥ ೯ ॥

ಸೋಽಹಂ ವದಾಮಿ ವಃ ಸರ್ವಂ ಯಮಮಾರ್ಗಸ್ಯ ನಿರ್ಣಯಂ ।
ಉತ್ಕ್ರಾಂತಿಕಾಲಾದಾರಭ್ಯ ಯಥಾ ನಾನ್ಯೋ ವದಿಷ್ಯತಿ ॥ ೧೦ ॥

---

೭. ಮನುಷ್ಯನು ಸ್ವರ್ಗಲೋಕಕ್ಕೆ ಹೋಗುವುದು ಹೇಗೆ? ನರಕಕ್ಕೆ ಅವರು ಹೋಗಬೇಕಾದರೆ ಯಾವ ಕರ್ಮವಿಪಾಕದಿಂದ? ಸ್ವರ್ಗದಲ್ಲಿ ಎಷ್ಟು ಬಗೆಯ ಸ್ಥಾನಗಳಿರುವುವು? ಅದೇರೀತಿ ನರಕದಲ್ಲಿಯೂ ಎಷ್ಟು ವಿಧಗಳಿರುವುವು.

೮. ಪುಣ್ಯಶಾಲಿಗಳು ಹೋಗುವ ಬಗೆ ಹೇಗೆ? ಪಾಪಿಗಳು ಹೋಗತಕ್ಕ ಕ್ರಮ ಹೇಗೆ? ಪುಣ್ಯವಂತರಿಗೂ ಪಾಪಿಗಳಿಗೂ, ಏನು ರೂಪ? ಏನು ಬಣ್ಣ? ಜೀವನನ್ನು ಯಮಲೋಕಕ್ಕೆ ಕೊಂಡೊಯ್ಯುವರಲ್ಲವೇ? ಅದನ್ನು ನಮಗೆ ತಿಳಿಸು.

೯-೧೦. ಎಂದು ಪ್ರಶ್ನಿಸಲು ವ್ಯಾಸಮಹರ್ಷಿಯು ಅವರನ್ನು ಕುರಿತು ಹೇಳಿದನು—ಎಲೈ ಮುನಿಶ್ರೇಷ್ಠರಿರಾ! ಕೇಳಿರಿ. ಯಾವನಿಗೆ ಮುಪ್ಪಿಲ್ಲದ (ದೃಢವಾದ) ಈ ಸಂಸಾರ ಚಕ್ರದ ಪರಿಭ್ರಮಣೆಯು ಇಲ್ಲದಿರುವ ನಾನು ಜೀವಿಯ ಪ್ರಾಣೋತ್ಕ್ರಮಣದ ಸಮಯ ಮೊದಲುಗೊಂಡು ಯಮಮಾರ್ಗದ ವಿವರಣೆಯನ್ನು ನಿರ್ಧರವಾದ ರೀತಿಯಲ್ಲಿ ಮತ್ತೊಬ್ಬನು ಹೇಳಲಾಗದಂತೆ ಎಲ್ಲವನ್ನೂ ನಿಮಗೆ ತಿಳಿಸುವೆನು, ಅದನ್ನು ಕೇಳಿರಿ.

ಸ್ವರೂಪಂ ಚೈವ ಮಾರ್ಗಸ್ಯ ಯನ್ಮಾಂ ಪೃಚ್ಛಥ ಸತ್ತಮಾಃ ।
ಯಮಲೋಕಸ್ಯ ಚಾಧ್ವಾನಮಂತರಂ ಮಾನುಷಸ್ಯ ಚ ॥ ೧೧ ॥

ಯೋಜನಾನಾಂ ಸಹಸ್ರಾಣಿ ಷಡಶೀತಿಸ್ತದಂತರಂ ।
ತಪ್ತತಾಮ್ರಮಿವಾತಪ್ತಂ ತದಧ್ವಾನಮುದಾಹೃತಂ ॥ ೧೨ ॥

ತದವಶ್ಯಂ ಹಿ ಗಂತವ್ಯಂ ಪ್ರಾಣಿಭಿರ್ಜೀವಸಂಜ್ಞಕೈಃ ।
ಪುಣ್ಯಾನ್ಪುಣ್ಯಕೃತೋ ಯಾಂತಿ ಪಾಪಾನ್ಪಾಪಕೃತೋಽಧಮಾಃ ॥ ೧೩ ॥

ದ್ವಾವಿಂಶತಿಶ್ಚ ನರಕಾ ಯಮಸ್ಯ ವಿಷಯೇ ಸ್ಥಿತಾಃ ।
ಯೇಷು ದುಷ್ಕೃತಕರ್ಮಾಣೋ ವಿಪಚ್ಯಂತೇ ಪೃಥಕ್ಪೃಥಕ್ ॥ ೧೪ ॥

ನರಕೋ ರೌರವೋ ರೌದ್ರಃ ಶೂಕರಸ್ತಾಲ ಏವ ಚ ।
ಕುಂಭೀಪಾಕೋ ಮಹಾಘೋರಃ ಶಾಲ್ಮಲೋಽಥ ವಿಮೋಹನಃ ॥ ೧೫ ॥

---

೧೧. ಎಲೈ ಸಾಧುಗಳಿರಾ! ನೀವು ಯಮಮಾರ್ಗದ ಸ್ವರೂಪವನ್ನೂ, ಯಮಲೋಕಕ್ಕೂ ಮನುಷ್ಯಲೋಕಕ್ಕೂ ಇರುವ ಅಂತರವನ್ನೂ ವಿವರಿಸುವಂತೆ ನನ್ನನ್ನು ಕೇಳಿದರಲ್ಲವೆ ?

೧೨. ಯಮಲೋಕಕ್ಕೂ ಮನುಷ್ಯಲೋಕಕ್ಕೂ ನಡುವೆ ಎಂಭತ್ತಾರು ಸಾವಿರ ಗಾವುದಗಳಷ್ಟು ದೂರವಿರುವುದು. ಆ ದಾರಿಯು ಕಾಸಿದ ತಾಮ್ರದಂತೆ ಸುಡುತ್ತಾ ಕೆಂಪಗೆ ಇರುವುದು.

೧೩. ಜೀವವೆಂಬ ಹೆಸರನ್ನು ಪಡೆದಿರುವ ಪ್ರಾಣಿಗಳು ಕಡ್ಡಾಯವಾಗಿ ಆ ದಾರಿಯಲ್ಲಿ ನಡೆಯಲೇಬೇಕು. ಪುಣ್ಯಕರ್ಮಗಳನ್ನು ಮಾಡಿದವರು ಪುಣ್ಯ ಲೋಕಗಳನ್ನೂ ಪಾಪಕಾರ್ಯಗಳನ್ನು ಮಾಡಿದ ಅಧಮರು ಪಾಪಲೋಕಗಳನ್ನೂ ಹೊಂದುವರು.

೧೪. ಯಮನ ರಾಜ್ಯದಲ್ಲಿ ಇಪ್ಪತ್ತೆರಡು ನರಕಗಳಿರುವುವು. ಅವು ಗಳಲ್ಲಿ ಪಾಪಗಳನ್ನು ಮಾಡಿದ ಜೀವರು ಬೇರೆಬೇರೆಯಾಗಿ ತಮ್ಮ ಕರ್ಮಫಲ ಗಳನ್ನು ಅನುಭವಿಸುವರು.

೧೫-೧೭. ಆ ನರಕಗಳು ಯಾವುವೆಂದರೆ, ರೌರವ, ಸೂಕರ, ತಾಲ, ಕುಂಭೀಪಾಕ, ಶಾಲ್ಮಲ, ವಿಮೋಹನ, ಕೀಟಾದ, ಕೃಮಿಭಕ್ಷ, ಲಾಲಾಭಕ್ಷ,

ಕೀಟಾದಃ ಕೃಮಿಭಕ್ಷಶ್ಚ ಲಾಲಾಭಕ್ಷೋ ಭ್ರಮಸ್ತಥಾ ।
ನದ್ಯಃ ಪೂಯವಹಾಶ್ಚಾನ್ಯಾ ರುಧಿರಾಂಭಸ್ತಥೈವ ಚ ॥ ೧೬ ॥

ಅಗ್ನಿಜ್ವಾಲೋ ಮಹಾಘೋರಃ ಸಂದಂಶಃ ಶುನಭೋಜನಃ ।
ಘೋರಾ ವೈತರಣೀ ಚೈವ ಅಸಿಪತ್ರವನಂ ತಥಾ ॥ ೧೭ ॥

ನ ತತ್ರ ವೃಕ್ಷಚ್ಛಾಯಾ ವಾ ನ ತಡಾಗಾಃ ಸರಾಂಸಿ ಚ ।
ನ ವಾಪ್ಯೋ ದೀರ್ಘಿಕಾ ವಾಪಿ ನ ಕೂಪೋ ನ ಪ್ರಪಾ ಸಭಾ ॥ ೧೮ ॥

ನ ಮಂಡಪೋ ನಾಯತನಂ ನ ನದ್ಯೋ ನ ಚ ಪರ್ವತಾಃ ।
ನ ಕಿಂಚಿದಾಶ್ರಮಸ್ಥಾನಂ ವಿದ್ಯತೇ ತತ್ರ ವರ್ತ್ಮನಿ ॥ ೧೯ ॥

ಯತ್ರ ವಿಶ್ರಮತೇ ಶ್ರಾಂತಃ ಪುರುಷೋऽತೀವಕರ್ಷಿತಃ ।
ಅವಶ್ಯಮೇವ ಗಂತವ್ಯಃ ಸ ಸರ್ವೈಸ್ತು ಮಹಾಪಥಃ ॥ ೨೦ ॥

---

ಭ್ರಮ, ಪೂಯವಾಹಿನೀನದಿ, ರುಧಿರನದಿ, ಮಹಾಘೋರವಾದ ಅಗ್ನಿಜ್ವಾಲ, ಸಂದಂಶ, ಶುನಭೋಜನ, ವೈತರಣಿ, ಅಸಿಪತ್ರವನ ಮೊದಲಾದುವು.

೧೮-೧೯. ಆ ದಾರಿಯಲ್ಲಿ ಮರಗಳ ನೆರಳಿಲ್ಲ, ಕೆರೆಗಳಿಲ್ಲ, ಕೊಳಗಳು ಇಲ್ಲ. ಬಾವಿಗಳು ಇಲ್ಲ, (ಅಗುಲವಾದ ಬಾವಿ) ದೀರ್ಘಿಕೆ(ಉದ್ದವಾದ ಜಲಾಶಯ ಗಳು, ಇಲ್ಲ, ಆಳವಾದ ಬಾವಿಗಳು ಇಲ್ಲ, ಅರವಟ್ಟಿಗೆಯೂ ಇಲ್ಲ (ಗಾಳಿಬಿಸಿಲು ಗಳಿಗೆ ಮರೆಯಾಗಿ) ಒಂದು ಮಂಟಪವಾಗಲೀ, ಮಠವಾಗಲೀ ಇಲ್ಲ. ಮತ್ತು ಒಂದು ನದಿಯಾಗಲೀ, ಬೆಟ್ಟವಾಗಲೀ ಆಶ್ರಮವಾಗಲೀ ಅಲ್ಲಿ ಇಲ್ಲ.

೨೦. ದಾರಿಯಲ್ಲಿ ಹೋಗುವ ಪುರುಷನು ವಿಶ್ರಮಿಸಿಕೊಳ್ಳಲು ಮೇಲೆ ಹೇಳಿದುದಾವುದೂ ಇಲ್ಲ. ಆದರೂ ಆ ದಾರಿಯಲ್ಲಿ ಎಲ್ಲರೂ ಪ್ರಯಾಣ ಮಾಡಲೇ ಬೇಕು.

ಪ್ರಾಪ್ತೇ ಕಾಲೇ ತು ಸಂತ್ಯಜ್ಯ ಸುಹೃದ್ಬಂಧುಧನಾದಿಕಂ ।
ಜರಾಯುಜಾಂಡಜಾಶ್ಚೈವ ಸ್ವೇದಜಾಶ್ಚೋದ್ಭಿಜಾಸ್ತಥಾ ॥ ೨೧ ॥

ಜಂಗಮಾಜಂಗಮಾಶ್ಚೈವ ಗಮಿಷ್ಯಂತಿ ಮಹಾಪಥಂ ।
ದೇವಾಸುರಮನುಷ್ಯೈಶ್ಚ ವೈವಸ್ವತವಶಾನುಗೈಃ ॥ ೨೨ ॥

ಸ್ತ್ರೀಪುಂನಪುಂಸಕೈಶ್ಚೈವ ಪೃಥಿವ್ಯಾಂ ಜೀವಸಂಜ್ಞಿತೈಃ ।
ಪೂರ್ವಾಹ್ಣೇ ಚಾಪರಾಹ್ಣೇ ವಾ ಮಧ್ಯಾಹ್ನೇ ವಾ ತಥಾ ಪುನಃ ॥ ೨೩ ॥

ಸಂಧ್ಯಾಕಾಲೇಽರ್ಧರಾತ್ರೇ ವಾ ಪ್ರತ್ಯೂಷೇ ವಾಪ್ಯುಪಸ್ಥಿತೇ ।
ವೃದ್ಧೈರ್ವಾ ಮಧ್ಯಮೈರ್ವಾಪಿ ಯೌವನಸ್ಥೈಸ್ತಥೈವ ಚ ॥ ೨೪ ॥

ಗರ್ಭವಾಸೋಽಥ ಬಾಲ್ಯೇ ವಾ ಗಂತವ್ಯಃ ಸ ಮಹಾಪಥಃ ।
ಪ್ರವಾಸಸ್ಥೈರ್ಗೃಹಸ್ಥೈರ್ವಾ ಪರ್ವತಸ್ಥೈಃ ಸ್ಥಲೇಽಪಿ ವಾ ॥ ೨೫ ॥

---

೨೧. ಕಾಲವು ಒದಗಿತೆಂದರೆ ಮುಗಿಯಿತು, ಜೀವನೆಂಬ ಸಂಜ್ಞೆಯನ್ನು ಹೊಂದಿದ ಭೂಮಿಯಲ್ಲಿರುವ ಸಕಲ ಪ್ರಾಣಿಗಳೂ, ತಮ್ಮ ಸ್ನೇಹಿತರನ್ನೂ, ಬಂಧುಗಳನ್ನೂ, ಹಣಕಾಸುಗಳನ್ನೂ, ಬಿಟ್ಟು ತೆರಳಲೇಬೇಕು. ಆ ಜೀವಿಗಳು, ಜರಾಯುಜರಾಗಲಿ (ತಾಯ ಬಸುರಿಂದ ಬಂದವರು) ಅಂಡಜರಾಗಲಿ (ಹಕ್ಕಿ ಹಾವು ಮೊದಲಾದುವೂ) ಸ್ವೇದಜಗಳಾಗಿರಲಿ (ಕ್ರಿಮಿ, ನೊಣ) ಉದ್ಭಿಜ್ಜ (ತರುಲತಾದಿಗಳು) ಗಳಾಗಿರಲಿ.

೨೨. ಚರರಾಗಿರಲಿ, ಚರರಲ್ಲದಿರಲಿ, ಅವರೆಲ್ಲರೂ ದೂರದ ಆ ಹಾದಿಯನ್ನು ಹಿಡಿಯಲೇಬೇಕು. ಯಮನ ಆಜ್ಞೆಗೆ ಒಳಪಟ್ಟವರು ದೇವತೆಗಳಾಗಲಿ, ಅಸುರರಾಗಲಿ, ಮನುಷ್ಯರಾಗಲಿ,

೨೩-೨೮. ಸ್ತ್ರೀಯರಾಗಲಿ, ಪುರುಷರಾಗಲಿ, ನಪುಂಸಕರಾಗಲಿ, ಭೂಲೋಕದಲ್ಲಿ ಜೀವನನೆಂಬ ಸಂಜ್ಞೆಯಿದ್ದರೆ ಸಾಕು, ಆ ಮಾರ್ಗದಲ್ಲಿ ಹೋಗಲೇಬೇಕು. ಬೆಳಗ್ಗೆ, ಮಧ್ಯಾಹ್ನ, ಸಂಜೆ, (ಅಪರಾಹ್ಣ) ಸಾಯಂಕಾಲ, ಅರ್ಧರಾತ್ರಿ ಪ್ರಾತಃಕಾಲ ಎಂಬ ನಿಯಮವಿಲ್ಲದೆ, ವೃದ್ಧ (ಮುದುಕ) ನಡುಹರೆಯದವನು, ಎಳೆಹರೆಯದವನು, ಹುಡುಗನು, ಬಸಿರಲ್ಲಿರುವ ಮಗು ಎಂಬ ವಯೋ

ಕ್ಷೇತ್ರಸ್ಥೈರ್ವಾ ಜಲಸ್ಥೈರ್ವಾ ಗೃಹಮಧ್ಯಗತೈಸ್ತಥಾ ।
ಆಸೀನೈಶ್ಚಾಸ್ಥಿತೈರ್ವಾಪಿ ಶಯನೀಯಗತೈಸ್ತಥಾ ॥ ೨೬ ॥

ಜಾಗ್ರದ್ಭಿರ್ವಾ ಪ್ರಸುಪ್ತೈರ್ವಾ ಗಂತವ್ಯಃ ಸ ಮಹಾಪಥಃ ।
ಇಹಾನುಭೂಯ ನಿರ್ದಿಷ್ಟಮಾಯುರ್ಜಂತುಃ ಸ್ವಯಂ ತದಾ ॥ ೨೭

ತಸ್ಯಾಂತೇ ಚ ಸ್ವಯಂ ಪ್ರಾಣೈರನಿಚ್ಛನ್ನಪಿ ಮುಚ್ಯತೇ ।
ಜಲಮಗ್ನಿರ್ವಿಷಂ ಶಸ್ತ್ರಂ ಕ್ಷುದ್ವ್ಯಾಧಿಃ ಪತನಂ ಗಿರೇಃ ॥ ೨೮ ॥

ನಿಮಿತ್ತಂ ಕಿಂಚಿದಾಸಾದ್ಯ ದೇಹೀ ಪ್ರಾಣೈರ್ವಿಮುಚ್ಯತೇ ।
ವಿಹಾಯ ಸುಮಹತ್ಕೃತ್ಸ್ನಂ ಶರೀರಂ ಪಾಂಚಭೌತಿಕಂ ॥ ೨೯ ॥

ಅನ್ಯಚ್ಛರೀರಮಾದತ್ತೇ ಯಾತನೀಯಂ ಸ್ವಕರ್ಮಜಂ ।
ದೃಢಂ ಶರೀರಮಾಪ್ನೋತಿ ಸುಖದುಃಖೋಪಭುಕ್ತಯೇ ॥ ೩೦ ॥

---

ಭೇದವಿಲ್ಲದೆ ಎಲ್ಲರೂ ಆ ದಾರಿಯಲ್ಲಿ ನಡೆಯಲೇಬೇಕು ಮತ್ತು ಪ್ರಯಾಣ ಹೊರಟಿರಲಿ, ಮನೆಯಲ್ಲಿರಲಿ, ಬೆಟ್ಟಗುಡ್ಡಗಳಮೇಲೆ ಇರಲಿ, ಬಯಲಿನಲ್ಲಿರಲಿ, ಹೊಲಗದ್ದೆಗಳಲ್ಲಿರಲಿ, ನೀರಿನಲ್ಲಿರಲಿ, ಮನೆಯ ಒಳಗಿನ ಕೋಣೆಯಲ್ಲಿರಲಿ, ಕುಳಿತಿರಲಿ, ನಿಂತಿರಲಿ, ಮಲಗಿರಲಿ, ಎಚ್ಚೆತ್ತಿರಲಿ, ನಿದ್ದೆಹೋಗುತ್ತಿರಲಿ, ಆ ಜೀವಿಗಳು ಆ ದೂರದ ಹಾದಿಯನ್ನು ಹಿಡಿಯಲೇಬೇಕು. ಜೀವಿಯು ತನಗೆ ಈ ಲೋಕದಲ್ಲಿ ನಿಯಮಿಸಲ್ಪಟ್ಟಿದ್ದಷ್ಟುಕಾಲ ಆಯುಸ್ಸನ್ನು ಅನುಭವಿಸಿ, ಅದು ಮುಗಿದನಂತರ ತನಗೆ ಇಷ್ಟವಿಲ್ಲದಿದ್ದರೂ ಪ್ರಾಣಗಳನ್ನು ಬಿಡಲೇಬೇಕು.

೨೯-೩೦. ನೀರಾಗಲಿ, ಬೆಂಕಿಯಾಗಲಿ, ವಿಷವಾಗಲಿ, ಶಸ್ತ್ರವಾಗಲಿ, ಹಸಿವಾಗಲಿ, ಖಾಯಿಲೆಯಾಗಲಿ, ಬೆಟ್ಟಹತ್ತಿ (ಎತ್ತರದಿಂದ) ಬೀಳುವುದಾಗಲಿ ಯಾವುದಾದರೂ ಒಂದುಕಾರಣದಿಂದ ದೇಹಿಯು ತನ್ನ ಪ್ರಾಣಗಳನ್ನು ಬಿಡುವನು. ಆ ಜೀವನು ಪಾಂಚಭೌತಿಕವಾದ ಈ ಶರೀರವನ್ನು ಬಹುಕಷ್ಟದಿಂದ ಆಗಲಿ ಪುಣ್ಯಪಾಪಗಳನ್ನೂ ಅನುಭವಿಸಲು ಬೇರೊಂದು ಯಾತನಾದೇಹವನ್ನು ಹೊಂದುವನು. ಆ ಜೀವಿಯು ತನ್ನ ಕರ್ಮಾನುಸಾರವಾಗಿ ಸುಖದುಃಖಗಳನ್ನು ಅನುಭವಿಸಬೇಕಾಗಿರುವುದರಿಂದ ಆ ಯಾತನಾಶರೀರವು ಬಹುಗಟ್ಟಿಯಾಗಿರುವುದು.

ತೇನ ಭುಂಕ್ತೇ ಸ ಕೃಚ್ಛ್ರಾಣಿ ಪಾಪಕರ್ತಾ ನರೋ ಭೃಶಂ ।
ಸುಖಾನಿ ಧಾರ್ಮಿಕೋ ಹೃಷ್ಟ ಇಹ ನೀತೋ ಯಮಕ್ಷಯೇ ॥ ೩೧ ॥

ಊಷ್ಮಾ ಪ್ರಕುಪಿತಃ ಕಾಯೇ ತೀವ್ರವಾಯುಸಮೀರಿತಃ ।
ಭಿನತ್ತಿ ಮರ್ಮಸ್ಥಾನಾನಿ ದೀಪ್ಯಮಾನೋ ನಿರಂಧನಃ ॥ ೩೨ ॥

ಉದಾನೋ ನಾಮ ಪವನಸ್ತತಶ್ಚೋರ್ಧ್ವಂ ಪ್ರವರ್ತತೇ ।
ಭುಜ್ಯತಾಮಂಬುಭಕ್ಷ್ಯಾಣಾಮಧೋಗತಿನಿರೋಧಕೃತ್ ॥ ೩೩ ॥

ತತೋ ಯೇನಾಂಬುದಾನಾನಿ ಕೃತಾನ್ಯನ್ನರಸಾಸ್ತಥಾ ।
ದತ್ತಾಃ ಸ ತಸ್ಯಾಮಾಹ್ಲಾದಮಾಪದಿ ಪ್ರತಿಪದ್ಯತೇ ॥ ೩೪ ॥

ಅನ್ನಾನಿ ಯೇನ ದತ್ತಾನಿ ಶ್ರದ್ಧಾಪೂತೇನ ಚೇತಸಾ ।
ಸೋಽಪಿ ತೃಪ್ತಿಮವಾಪ್ನೋತಿ ವಿನಾಪ್ಯನ್ನೇನ ವೈ ತದಾ ॥ ೩೫ ॥

---

೩೧. ಇಲ್ಲಿಂದ ಯಮಲೋಕಕ್ಕೆ ಒಯ್ಯಲ್ಪಟ್ಟವನು ಪಾಪಾತ್ಮನಾದರೆ ಅನೇಕವಾದ ಕಷ್ಟಗಳನ್ನು ಅನುಭವಿಸುವನು. ಧರ್ಮಾತ್ಮನಾದರೆ ಸಂತೋಷ ದಿಂದ ಸುಖಗಳನ್ನು ಅನುಭವಿಸುವನು.

೩೨. ಆ ಮಾರ್ಗದಲ್ಲಿ ಬಹುಜೋರಾಗಿ ಗಾಳಿಯು ಬೀಸುವುದರಿಂದ ಮೈಯಲ್ಲಿ ಬೇಗೆಯು ಹೊತ್ತಿಕೊಳ್ಳುವುದು. ಅದು ಸೌದೆ ಮೊದಲಾದ ಸಾಧನ ಗಳಿಲ್ಲದಿದ್ದರೂ ಉರಿಯುತ್ತಾ, ಮರ್ಮಸ್ಥಳಗಳನ್ನು ಭೇದಿಸುವುದು. (ಚುಚ್ಚ ತೊಡಗುವುದು)

೩೩. ಆದರಿಂದ ಆ ಜೀವನ ದೇಹದಲ್ಲಿ ಉದಾನವೆಂಬ ವಾಯುವು ಮೇಲ್ಮುಖನಾಗಿ ಹರಿಯತೊಡಗುವುದು. ಆ ವಾಯುವು ತಿಂದಿರುವ ಅನ್ನ, ನೀರು, ಮೊದಲಾದ ಆಹಾರಗಳು ಕೆಳಗೆ ಇಳಿಯದಂತೆ ಮಾಡುವುದು.

೩೪. ಆದುದರಿಂದ ಭೂಲೋಕದಲ್ಲಿ ಯಾವನು ಜಲದಾನವನ್ನೂ ಅನ್ನ ರಸಗಳ ದಾನವನ್ನೂ ಮಾಡಿರುವನೋ ಅವನಿಗೆ ಆಪತ್ಸಮಯದಲ್ಲಿಯೂ ಸಹ ತೊಂದರೆಯಿಲ್ಲದೆ ಸಂತೋಷವೇ ಆಗುವುದು.

೩೫. ಮತ್ತು ಯಾವನು ಶ್ರದ್ಧೆಯಿಂದ ಅನ್ನದಾನವನ್ನು ಮಾಡಿರು ವನೋ ಅವನು ಆ ಸಮಯದಲ್ಲಿ ಅನ್ನ ಸಿಗದೆ ಇದ್ದರೂ ಹಸಿವಾಗದೆ ತೃಪ್ತಿ ಯಿಂದ ಇರುವನು.

ಯೇನಾನೃತಾನಿ ನೋಕ್ತಾನಿ ಪ್ರೀತಿಭೇದಃ ಕೃತೋ ನ ಚ ।
ಆಸ್ತಿಕಃ ಶ್ರದ್ಧಧಾನಶ್ಚ ಸುಖಮೃತ್ಯುಂ ಸ ಗಚ್ಛತಿ ॥ ೩೬ ॥

ದೇವಬ್ರಾಹ್ಮಣಪೂಜಾಯಾಂ ನಿರತಾಶ್ಚಾನಸೂಯಕಾಃ ।
ಶುಕ್ಲಾ ವದಾನ್ಯಾ ಹ್ರೀಮಂತಸ್ತೇ ನರಾಃ ಸುಖಮೃತ್ಯವಃ ॥ ೩೭ ॥

ಯಃ ಕಾಮಾನ್ನಾಪಿ ಸಂರಂಭಾನ್ನ ದ್ವೇಷಾದ್ಧರ್ಮಮುತ್ಸೃಜೇತ್ ।
ಯಥೋಕ್ತಕಾರೀ ಸೌಮ್ಯಶ್ಚ ಸ ಸುಖಂ ಮೃತ್ಯುಮೃಚ್ಛತಿ ॥ ೩೮ ॥

ವಾರಿದಾಸ್ತೃಷಿತಾನಾಂ ಯೇ ಕ್ಷುಧಿತಾನ್ನಪ್ರದಾಯಿನಃ ।
ಪ್ರಾಪ್ನುವಂತಿ ನರಾಃ ಕಾಲೇ ಮೃತ್ಯುಂ ಸುಖಸಮನ್ವಿತಂ ॥ ೩೯ ॥

---

೩೬. ಯಾವ ಮನುಷ್ಯನು ಸುಳ್ಳನ್ನು ಹೇಳದೆಯೂ, ಪ್ರೀತಿಯನ್ನು ಭಂಗಪಡಿಸದೆಯೂ, ಆಸ್ತಿಕನಾಗಿಯೂ, ಶ್ರದ್ಧಾನ್ವಿತನಾಗಿಯೂ ಇರುವನೋ ಅಂಥವನು ಸುಖವಾಗಿ ಪ್ರಾಣವನ್ನು ಬಿಡುವನು.

೩೭. ಯಾರು ದೇವಬ್ರಾಹ್ಮಣರ ಪೂಜೆಯಲ್ಲಿ ಆಸಕ್ತರೋ, ಮತ್ತು ಅಸೂಯಾಪರರಲ್ಲವೋ, ಅಲ್ಲದೆ, ಶುದ್ಧರೂ, ದಾನಿಗಳೂ, ನಾಚಿಕೆಯುಳ್ಳವರೂ ಆಗಿರುವರೋ ಅಂತಹ ಮನುಷ್ಯರು ಸುಖವಾಗಿ ಮರಣವನ್ನು ಹೊಂದುವರು.

೩೮. ಯಾವನು ಇಚ್ಛಾಪೂರ್ವಕವಾಗಿಯಾಗಲಿ, ಗಾಬರಿಯಿಂದಲಾಗಲೀ, ದ್ವೇಷದಿಂದಲಾಗಲೀ ಧರ್ಮವನ್ನು ಬಿಡದೆ ಇರುವನೋ ಮತ್ತು ಆಡಿದ ಮಾತನ್ನು ನಡೆಸುತ್ತಲೂ, ಸೌಮ್ಯನಾಗಿಯೂ ಇರುವನೋ ಆ ಮನುಷ್ಯನು ಅನಾಯಾಸವಾಗಿ ಸಾಯುವನು.

೩೯. ಯಾರು ಬಾಯಾರಿದವರಿಗೆ ನೀರನ್ನು ಕೊಡುವರೋ, ಹಸಿದವರಿಗೆ ಅನ್ನವನ್ನು ನೀಡುವರೋ ಅಂತಹ ಮನುಜರು ಸಕಾಲದಲ್ಲಿ ಸುಖದಿಂದ ಸಾವನ್ನು ಪಡೆಯುವರು.

ಶೀತಂ ಜಯಂತಿ ಧನದಾಸ್ತಾಪಂ ಚಂದನದಾಯಿನಃ ।
ಪ್ರಾಣಘ್ನೀಂ ವೇದನಾಂ ಕಷ್ಟಾಂ ಯೇ ಚಾನ್ಯೋದ್ವೇಗಧಾರಿಣಃ ॥ ೪೦ ॥

ಮೋಹಂ ಜ್ಞಾನಪ್ರದಾತಾರಸ್ತಥಾ ದೀಪಪ್ರದಾಸ್ತಮಃ ।
ಕೂಟಸಾಕ್ಷೀ ಮೃಷಾವಾದೀ ಯೋ ಗುರುರ್ನಾನುಶಾಸ್ತಿ ವೈ ॥ ೪೧ ॥

ತೇ ಮೋಹಮೃತ್ಯವಃ ಸರ್ವೇ ತಥಾ ಯೇ ವೇದನಿಂದಕಾಃ ।
ವಿಭೀಷಣಾಃ ಪೂತಿಗಂಧಾಃ ಕೂಟಮುದ್ಗರಪಾಣಯಃ ॥ ೪೨ ॥

ಆಗಚ್ಛಂತಿ ದುರಾತ್ಮಾನೋ ಯಮಸ್ಯ ಪುರುಷಾಸ್ತಥಾ ।
ಕ್ರಾಪ್ತೇಷು ದೃಕ್ಪಥಂ ತೇಷು ಜಾಯತೇ ತಸ್ಯ ವೇಪಥುಃ ॥ ೪೩ ॥

---

೪೦. ಧನವನ್ನಿತ್ತವರು ಶೀತಬಾಧೆಯನ್ನು ಜಯಿಸುವರು. ಗಂಧವನ್ನು ದಾನಮಾಡಿದವರು ತಾಪವನ್ನು ಜಯಿಸುವರು. ಮತ್ತು ಯಾರು ಮತ್ತೊಬ್ಬರ ವೇದನೆಯೇ ತಮ್ಮ ವೇದನೆಯೆಂದು ಭಾವಿಸಿ ಪರಿತಪಿಸುವರೋ ಅಂಥಹ ಪುಣ್ಯಾತ್ಮರು ಪ್ರಾಣಹೋಗುವಂತಹ ಕಷ್ಟವಾದ ವ್ಯಥೆಯನ್ನೂ ಜಯಿಸುವರು.

೪೧. ಜ್ಞಾನದಾನಮಾಡಿದವರು ಮೋಹವನ್ನೂ ದೀಪದಾನಮಾಡಿದವರು ಕತ್ತಲೆಯನ್ನೂ ಜಯಿಸುವರು. ಯಾರು ಸುಳ್ಳು ಸಾಕ್ಷ್ಯ ಹೇಳುವರೋ, ಯಾರು ನಿಜವಲ್ಲದುದನ್ನೇ ಹೇಳುವ ಸ್ವಭಾವದವರೋ, ಯಾರು ಗುರುವಾಗಿದ್ದರೂ ಸರಿಯಾಗಿ ಶಿಕ್ಷಣವನ್ನು ಕೊಡುವುದಿಲ್ಲವೋ–

೪೨-೪೩. ಮತ್ತು ಯಾರು ವೇದಗಳನ್ನು ನಿಂದಿಸುವರೋ ಅವರೆಲ್ಲರೂ ಕೊನೆಗೆ ಅಜ್ಞಾನದಿಂದ ಸಾಯುವರು. ಅಂಥವರನ್ನು ಕರೆದೊಯ್ಯಲು ಭಯಂಕರವಾದ ಆಕಾರವುಳ್ಳವರೂ, ದುರ್ವಾಸನೆಯುಳ್ಳವರೂ, ಕೂಟಮುದ್ಗರವೆಂಬ ಆಯುಧವನ್ನು ಧರಿಸಿದವರೂ ಆದ ಅತಿಕೆಟ್ಟ ಹೃದಯದ ಯಮಭಟರು ಬರುವರು. ಅವರು ಕಣ್ಣಿಗೆ ಬೀಳುತ್ತಲೇ ನಡುಕವುಂಟಾಗುವುದು.

ಕ್ರಂದತ್ಯವಿರತಃ ಸೋಽಥ ಭ್ರಾತೃಮಾತೃಪಿತೄಂಸ್ತಥಾ ।
ಸಾ ತು ವಾಗಸ್ಫುಟಾ ವಿಪ್ರಾ ಏಕವರ್ಣಾ ವಿಭಾವ್ಯತೇ ॥ ೪೪ ॥

ದೃಷ್ಟಿರ್ವಿಭ್ರಾಮ್ಯತೇ ತ್ರಾಸಾತ್ಕಾಸಾವೃಷ್ಟ್ಯತ್ಯಥಾನನಂ ।
ತತಃ ಸ ವೇದನಾವಿಷ್ಟಂ ತಚ್ಛರೀರಂ ವಿಮುಂಚತಿ ॥ ೪೫ ॥

ವಾಯ್ವಗ್ರಸಾರೀ ತದ್ರೂಪದೇಹಮನ್ಯತ್ಪ್ರಪದ್ಯತೇ ।
ತತ್ಕರ್ಮಯಾತನಾರ್ಥೇ ಚ ನ ಮಾತೃಪಿತೃಸಂಭವಂ ॥ ೪೬ ॥

ತತ್ಪ್ರಮಾಣವಯೋಽವಸ್ಥಾಸಂಸ್ಥಾನೈಃ ಪ್ರಾಪ್ಯತೇ ವ್ಯಥಾ ।
ತತೋ ದೂತೋ ಯಮಸ್ಯಾಥ ಪಾಶೈರ್ಬಧ್ನಾತಿ ದಾರುಣೈಃ ॥ ೪೭ ॥

ಜಂತೋಃ ಸಂಕ್ರಾಪ್ತಕಾಲಸ್ಯ ವೇದನಾರ್ತಸ್ಯ ವೈ ಭೃಶಂ ।
ಭೂತೈಃ ಸಂತ್ಯಕ್ತದೇಹಸ್ಯ ಕಂಠಪ್ರಾಪ್ತಾನಲಸ್ಯ ಚ ॥ ೪೮ ॥

---

೪೪. ಎಲೈ ಬ್ರಾಹ್ಮಣರಿರಾ! ಆಗ ಜೀವಿಯು ಅಣ್ಣಾ, ಅಮ್ಮಾ, ಅಪ್ಪಾ, ಎಂದು ಬಿಡುವಿಲ್ಲದೆ ಒರಲುವನು. ಆ ಮಾತು ಸಹ ಸ್ಫುಟವಾಗಿಲ್ಲದೆ ಒಂದೊಂದಕ್ಷರವೇ ಕೇಳಿಸುವುದು.

೪೫. ಆಗವನ ದೃಷ್ಟಿಯು ಹೆದರಿಕೆಯಿಂದ ಗರ್ರನೆ ಸುತ್ತುವುದು. ಗಂಟಲಲ್ಲಿ ಕೆಮ್ಮು ಕಟ್ಟಿಕೊಂಡು ಬರುವುದು. ಅನಂತರ ಆ ಜೀವಿಯು ಬಹು ವೇದನೆಯಿಂದ ತನ್ನ ಶರೀರವನ್ನು ತ್ಯಜಿಸುವನು.

೪೬. ಜೀವನು ಸ್ಥೂಲದೇಹವನ್ನು ತ್ಯಜಿಸಿದ ನಂತರ ಗಾಳಿಯಂತೆ ವೇಗವಾಗಿ ಹೋಗಬೇಕಾದುದರಿಂದಲೂ, ತನ್ನ ತನ್ನ ಕರ್ಮಾನುಗುಣವಾದ ಯಾತನೆಯನ್ನು ಅನುಭವಿಸಬೇಕಾದುದರಿಂದಲೂ ಅದಕ್ಕೆತಕ್ಕ ರೂಪವುಳ್ಳ ಬೇರೊಂದು ಸೂಕ್ಷ್ಮ ಶರೀರವನ್ನು ಹೊಂದುವನು. ಆದರೆ ಅದು ಮಾತಾಪಿತೃಗಳಿಂದ ಉಂಟಾದ ದೇಹವಲ್ಲ.

೪೭. ಅದಕ್ಕೆತಕ್ಕ ಪ್ರಮಾಣ, ವಯಸ್ಸು, ಅವಸ್ಥೆ, ಆಕೃತಿಗಳನ್ನು ಪಡೆದನಂತರ ಜೀವನು ವ್ಯಥೆಯನ್ನು ಅನುಭವಿಸುವನು. ಅನಂತರ ಯಮದೂತನು ಆ ಶರೀರವನ್ನು ಭಯಂಕರವಾದ ಪಾಶಗಳಿಂದ ಬಿಗಿಯುವನು.

೪೮-೪೯. ನಿಯಮಿತವಾದ ಕಾಲವು ಮುಗಿಯಬಂದಾಗ ಜೀವನು ಬಹುವಾಗಿ ವೇದನೆಯಿಂದ ತಳಮಳಗೊಳ್ಳುವನು. ಆಗ ಶರೀರವನ್ನು ಪಂಚ

**ಶರೀರಾಚ್ಚ್ಯಾವಿತೋ ಜೀವೋ ರೋರನೀತಿ ತಥೋಲ್ಬಣಂ ।**
**ನಿರ್ಗತೋ ವಾಯುಭೂತಸ್ತು ಷಾಟ್ಕೌಶಿಕಕಲೇವರೇ ॥ ೪೯ ॥**

**ಮಾತೃಭಿಃ ಪಿತೃಭಿಶ್ಚೈವ ಭ್ರಾತೃಭಿರ್ಮಾತುಲೈಸ್ತಥಾ ।**
**ದಾರೈಃ ಪುತ್ರೈರ್ವಯಸ್ಯೈಶ್ಚ ಗುರುಭಿಸ್ತ್ಯಜ್ಯತೇ ಭುವಿ ॥ ೫೦ ॥**

**ದೃಶ್ಯಮಾನಶ್ಚ ತೈರ್ದೀನೈರಶ್ರುಪೂರ್ಣೇಕ್ಷಣೈರ್ಭೃಶಂ ।**
**ಸ್ವಶರೀರಂ ಸಮುತ್ಸೃಜ್ಯ ವಾಯುಭೂತಸ್ತು ಗಚ್ಛತಿ ॥ ೫೧ ॥**

**ಅಂಧಕಾರಮಪಾರಂ ಚ ಮಹಾಘೋರಂ ತಮೋವೃತಂ ।**
**ಸುಖದುಃಖಪ್ರದಾತಾರಂ ದುರ್ಗಮಂ ಪಾಪಕರ್ಮಣಾಂ ॥ ೫೨ ॥**

**ದುಃಸಹಂ ಚ ದುರಂತಂ ಚ ದುರ್ನಿರೀಕ್ಷಂ ದುರಾಸದಂ ।**
**ದುರಾಪಮತಿದುರ್ಗಂ ಚ ಪಾಪಿಷ್ಠಾನಾಂ ಸದಾಹಿತಂ ॥ ೫೩ ॥**

---

ಭೂತಗಳು ಬಿಡಲಾರಂಭಿಸುವುವು. ಪ್ರಾಣವಾಯುವು ಕುತ್ತಿಗೆಯನ್ನು ದಾಟು ವುದು. ಈರೀತಿಯಾಗಿ ಅಷ್ಟುಕಾಲ ತಾನು ಮಮತೆಯಿಂದ ಇದ್ದ ಶರೀರದಿಂದ ಬಿಡಲ್ಪಟ್ಟ ಜೀವನು, ಷಡ್ಗರ್ಭಪ್ರಮಾಣವಾದ ಬೇರೊಂದು ಸೂಕ್ಷ್ಮಶರೀರದಲ್ಲಿ ವಾಯುರೂಪದಿಂದ ಪ್ರವೇಶಿಸುವನು. ಆಗ ಅವನು ಬಹುವಾಗಿ ವಿಲಪಿಸು ವನು. (ಗೋಳಾಡುವನು)

೫೦-೫೧. ಮತ್ತು ಭೂಲೋಕದಲ್ಲಿ ತನ್ನವರಾಗಿದ್ದ ತಾಯಿ, ತಂದೆ, ಅಣ್ಣ, ಸೋದರಮಾವ, ಹೆಂಡತಿ, ಮಕ್ಕಳು, ಸ್ನೇಹಿತರು, ಗುರುಗಳು ಇವರೆಲ್ಲರಿಂದಲೂ |ದೂರವಾಗುವನಲ್ಲದೆ ಆ ಬಂಧುಗಳು ದೈನ್ಯದಿಂದ ಕಣ್ಣೀರು ಸುರಿಸುತ್ತಾ ತನ್ನನ್ನು ನೋಡುತ್ತಿರುವಂತೆಯೇ ತನ್ನ ದೇಹವನ್ನು ಬಿಟ್ಟು ಗಾಳಿಯರೂಪದಲ್ಲಿ ಹೊರಟುಹೋಗುವನು.

೫೨-೫೩. ಹಾಗೆ ಹೊರಟ ಜೀವನು, ಅತಿಘೋರವಾಗಿ ಎಲ್ಲೆಲ್ಲಿಯೂ, ಕತ್ತಲೆಯಿಂದ ತುಂಬಿ ಒಳಹೊಗಲು ಅಸಾಧ್ಯವಾದುದೂ, ಪಾಪಕಾರ್ಯಾ ಸಕ್ತರಿಗೆ ಪ್ರವೇಶಿಸಲು ಸಾಧ್ಯವಿಲ್ಲದುದೂ, ದುಃಖಪ್ರದವೂ, ಸಹಿಸಲು ಆಗ ದುದೂ, ದುರಂತವೂ, ದುರ್ನಿರೀಕ್ಷವೂ ಪಾಪಿಷ್ಠರಿಗೆ ಎಂದೆಂದಿಗೂ ಕೆಡಿಕೆಸಿಸಿ ದುದೂ ಆದ ಕಗ್ಗತ್ತಲನ್ನು ಪ್ರವೇಶಿಸುವನು.

ಕೃಷ್ಯಮಾಣಾಶ್ಚ ತೈರ್ಭೂತೈರ್ಯಾಮ್ಯೈಃ ಪಾಶೈಸ್ತು ಸಂಯುತಾಃ ।
ಮುದ್ಗರೈಸ್ತಾಡ್ಯಮಾನಾಶ್ಚ ನೀಯಂತೇ ತಂ ಮಹಾಪಥಂ ॥ ೫೪ ॥

ಕ್ಷೀಣಾಯುಷಂ ಸಮಾಲೋಕ್ಯ ಪ್ರಾಣಿನಂ ಚಾಯುಷಕ್ಷಯೇ ।
ನಿನೀಷವಃ ಸಮಾಯಾಂತಿ ಯಮದೂತಾ ಭಯಂಕರಾಃ ॥ ೫೫ ॥

ಆರೂಢಾ ಯಾನಕಾಲೇ ತು ಋಕ್ಷವ್ಯಾಘ್ರಖರೇಷು ಚ ।
ಉಷ್ಟ್ರೇಷು ವಾನರೇಷ್ವನ್ಯೇ ವೃಶ್ಚಿಕೇಷು ವೃಕೇಷು ಚ ॥ ೫೬ ॥

ಉಲೂಕಸರ್ಪಮಾರ್ಜಾರಂ ತಥಾನ್ಯೇ ಗೃಧ್ರವಾಹನಾಃ ।
ಶ್ಯೇನಶೃಗಾಲಮಾರೂಢಾಃ ಸರಘಾಕಂಕವಾಹನಾಃ ॥ ೫೭ ॥

---

೫೪. ಆಗ ಜೀವನನ್ನು ಭೂತಾಕಾರದ ಯಮದೂತರು ಕಾಲಪಾಶಗಳಿಂದ ಬಿಗಿದು ಎಳೆಯುತ್ತಾ ಮುದ್ಗರಗಳಿಂದ ಹೊಡೆಯುತ್ತಾ ದೂರದ ಹಾದಿಯಲ್ಲಿ ಕರೆದೊಯ್ಯುವರು.

೫೫. ಆ ಭಯಂಕರರಾದ ಯಮದೂತರು ಪ್ರಾಣಿಯಾದವನಿಗೆ ಆಯುಸ್ಸು ಮುಗಿಯುತ್ತಾ ಬಂದಿದೆಯೆಂದು ತಿಳಿದೊಡನೆಯೇ, ಸಮಯಕ್ಕೆ ಸರಿಯಾಗಿ ಅವನನ್ನು ಎಳೆದುಕೊಂಡುಹೋಗಲು ಬರುವರು.

೫೬. ಆ ಸಮಯದಲ್ಲಿ ಅವರು ಒಂಟೆಗಳು, ಹುಲಿಗಳು, ಕತ್ತೆಗಳು, ಕರಡಿಗಳು, ಕೋತಿಗಳು, ಚೇಳುಗಳು, ತೋಳಗಳು ಇವುಗಳಲ್ಲಿ ಯಾವುದಾದರೂ ಒಂದನ್ನು ಹತ್ತಿಕೊಂಡು ಬರುವರು.

೫೭. ಕೆಲವರು ಗೂಬೆಯನ್ನೋ, ಹಾವನ್ನೋ, ಬೆಕ್ಕನ್ನೋ, ಹದ್ದನ್ನೋ ಹತ್ತಿಕೊಂಡು ಬರುವರು. ಕೆಲವರು ಗಿಡುಗನನ್ನಾಗಲಿ, ನರಿಯನ್ನಾಗಲಿ, ಕಾಡುನೊಣವನ್ನಾಗಲಿ, ಕಂಕವನ್ನಾಗಲಿ (ಒಂದು ಬಗೆಯ ಹದ್ದು) ಏರಿಕೊಂಡು ಬರುವರು.

ವರಾಹಪಶುವೇತಾಲಮಹಿಷಾಸ್ಯಾಸ್ತಥಾ ಪರೇ ।
ನಾನಾರೂಪಧರಾ ಘೋರಾಃ ಸರ್ವಪ್ರಾಣಿಭಯಂಕರಾಃ ॥ ೫೮ ॥

ದೀರ್ಘಮುಷ್ಕಾಃ ಕರಾಲಾಸ್ಯಾ ವಕ್ರನಾಸಾಸ್ತ್ರಿಲೋಚನಾಃ !
ಮಹಾಹನುಕಪೋಲಾಸ್ಯಾಃ ಪ್ರಲಂಬದಶನಚ್ಛದಾಃ ॥ ೫೯ ॥

ನಿರ್ಗತೈರ್ವಿಕೃತಾಕಾರೈರ್ದಶನೈರಂಕುರೋಪಮೈಃ ।
ಮಾಂಸಶೋಣಿತದಿಗ್ಧಾಂಗಾ ದಂಷ್ಟ್ರಾಭಿರ್ಭೃಶಮುಲ್ಬಣೈಃ ॥ ೬೦ ॥

ಮುಖೈಃ ಪಾತಾಲಸದೃಶೈರ್ಜ್ವಲಜ್ಜಿಹ್ವೈರ್ಭಯಂಕರೈಃ ।
ನೇತ್ರೈಃ ಸುವಿಕೃತಾಕಾರೈರ್ಜ್ವಲತ್ಪಿಂಗಲಚಂಚಲೈಃ ॥ ೬೧ ॥

---

೫೮. ಮತ್ತೆ ಕೆಲವರು ಹಂದಿ, ಹಸು, ಬೇತಾಳ, ಕೋಣಗಳಂತೆ ಮುಖಗಳನ್ನು ಧರಿಸಿರುವರು. ಅವರು ನಾನಾವಿಧವಾದ ರೂಪಗಳನ್ನು ತಾಳಿ ಎಲ್ಲ ಪ್ರಾಣಿಗಳಿಗೂ ಭಯವಾಗುವಂತೆ ಇರುವರು.

೫೯. ಕೆಲವರಿಗೆ ಅಂಡಕೋಶಗಳು ಉದ್ದವಾಗಿರುವುವು. ಕೆಲವರಿಗೆ ಮುಖವು ಗಂಟುಗಂಟಾಗಿರುವುದು. ಕೆಲವರಿಗೆ ಮೂಗು ಸೊಟ್ಟಾಗಿರುವುದು. ಒಬ್ಬರಿಗೆ ಮೂರು ಕಣ್ಣುಗಳು. ಇನ್ನೊಬ್ಬರಿಗೆ ಹನುಪ್ರದೇಶವು ದೊಡ್ಡದು. ಮತ್ತೊಬ್ಬರಿಗೆ ಕೆನ್ನೆಯುದ್ದ. ಬೇರೊಬ್ಬರಿಗೆ ಬಾಯಿ ಅಗಲ. ಮಗದೊಬ್ಬನಿಗೆ ಜೋಲುಬಿದ್ದ ತುಟಿ.

೬೦. ಕೆಲವರ ಹಲ್ಲುಗಳು ವಿಕಾರವಾಗಿ ಮೊಳಕೆಗಳಂತೆ ಈಚೆಗೆ ಹೊರಟುಕೊಂಡಿರುವುವು. ಕೆಲವರಿಗೆ ಮೈಮೇಲೆಲ್ಲಾ ರಕ್ತವೂ ಮಾಂಸವೂ ಮೆತ್ತಿಕೊಂಡಿರುವುದು. ಕೆಲವರ ಬಾಯೊಳಗೆ ಭಯಂಕರವಾದ ಕೋರೆದಾಡೆಗಳಿರುವುವು.

೬೧. ಕೆಲವರ ಮುಖಗಳು ಪಾತಾಳವನ್ನು ಹೋಲುತ್ತಾ ಉರಿಯುತ್ತಿರುವ ನಾಲಗೆಗಳಿಂದ ಕೂಡಿ ಹೆದರಿಕೆಯನ್ನು ಹುಟ್ಟಿಸುವುವು. ಮತ್ತು ಕಣ್ಣಾಲಿಗಳು ವಿಕಾರವಾಗಿ ಉರಿಯುತ್ತಾ ಹೊಂಬಣ್ಣದಿಂದ ಕೂಡಿ ಇತ್ತತ್ತ ತೊಳಲುತ್ತಿರುವುವು.

ಮಾರ್ಜಾರೋಲೂಕಖದ್ಯೋತಶಕ್ರಗೋಪವದುದ್ಧತೈಃ ।
ಕೇಕರೈಃ ಸಂಕುಲೈಸ್ತಬ್ಧೈರ್ಲೋಚನೈಃ ಪಾವಕೋಪಮೈಃ ॥ ೬೨ ॥

ಭೃಶಮಾಭರಣೈರ್ಭೀಮೈರಾಬದ್ಧೈರ್ಭುಜಗೋಪಮೈಃ ।
ಶೋಣಾಸರಲಗಾತ್ರೈಶ್ಚ ಮುಂಡಮಾಲಾವಿಭೂಷಿತೈಃ ॥ ೬೩ ॥

ಕಂಠಸ್ಥಕೃಷ್ಣಸರ್ಪೈಶ್ಚ ಫೂತ್ಕಾರರವಭೀಷಣೈಃ ।
ವಹ್ನಿಜ್ವಾಲೋಪಮೈಃ ಕೇಶೈಸ್ತಬ್ಧರೂಕ್ಷೈರ್ಭಯಂಕರೈಃ ॥ ೬೪ ॥

ಬಭ್ರುಪಿಂಗಲಲೋಲೈಶ್ಚ ಕದ್ರುಶ್ಮಶ್ರುಭಿರಾವೃತಾಃ ।
ಭುಜದಂಡೈರ್ಮಹಾಘೋರೈಃ ಪ್ರಲಂಬೈಃ ಪರಿಘೋಪಮೈಃ ॥ ೬೫ ॥

---

೬೨. ಅಲ್ಲದೆ ಅವರೊಬ್ಬೊಬ್ಬರ ಕಣ್ಣುಗಳೂ, ಬೆಕ್ಕಿನಂತೆಯೂ, ಗೂಬೆಯಂತೆಯೂ, ಮಿಣುಕು ಹುಳುವಿನಂತೆಯೂ, ಇಂದ್ರಗೋಪವೆಂಬ ಹುಳುವಿನಂತೆಯೂ ಇರುವುವಲ್ಲದೆ, ಕೆಲವು ಕೆಕ್ಕರದೃಷ್ಟಿಯುಳ್ಳವಾಗಿಯೂ, ಕೆಲವು ಗೀಜು ಕಟ್ಟಿಕೊಂಡಿರುವುವೂ, ಕೆಲವು ನಿಂತಕಡೆಯೇ ನಿಂತಿರುವುವೂ, ಕೆಲವು ಬೆಂಕಿಯಂತೆ ಉರಿಯುವುವೂ ಆಗಿರುವುವು.

೬೩. ಅವರು ತೊಟ್ಟುಕೊಂಡಿರುವ ಒಡವೆಗಳೂ ಭಯಂಕರವಾದುವುಗಳೇ. ಅವು ಹಾವುಗಳಂತೆಯೂ, ಶೋಣೆಯ ಸರಲಗಳಂತೆಯೂ, ಮುಂಡಮಾಲಿಕೆಗಳಂತೆಯೂ ಇರುವುವು.

೬೪–೬೫. ಆ ಯಮದೂತರ ಕತ್ತಿನಲ್ಲಿ ಭಯಂಕರವಾಗಿ ಫೂತ್ಕಾರವನ್ನು ಮಾಡುತ್ತಿರುವ ಕೃಷ್ಣಸರ್ಪಗಳು ನೇತಾಡುತ್ತಿರುವುವು. ಮತ್ತು ತಲೆಯ ಕೂದಲುಗಳು ಬೆಂಕಿಯ ಉರಿಯಂತೆ ಕೆಂಪಾಗಿಯೂ, ಬೂದಾಗಿಯೂ, ಹೊಂಬಣ್ಣವಾಗಿಯೂ ಇರುವುವಲ್ಲದೆ ನೆಟ್ಟಗೂ, ಒರಟಾಗಿಯೂ ಇರುವುವು. ಮತ್ತು ಅವರ ಗಡ್ಡಮೀಸೆಗಳು ಮುಖವನ್ನು ತುಂಬಿರುವುವು. ಅವರ ತೋಳುಗಳು ಪರಿಘದಂತೆ ಮಹಾಭಯಂಕರವಾಗಿ ನೀಳವಾಗಿರುವುವು.

ಕೇಚಿದ್ದ್ವಿಬಾಹವಸ್ತತ್ರ ತಥಾನ್ಯೇ ಚ ಚತುರ್ಭುಜಾಃ ।
ದ್ವಿರಷ್ಟಬಾಹವಶ್ಚಾನ್ಯೇ ದಶವಿಂಶಭುಜಾಸ್ತಥಾ ॥ ೬೬ ॥

ಅಸಂಖ್ಯಾತಭುಜಾಶ್ಚಾನ್ಯೇ ಕೇಚಿದ್ಬಾಹುಸಹಸ್ರಿಣಃ ।
ಆಯುಧೈರ್ವಿಕೃತಾಕಾರೈಃ ಪ್ರಜ್ವಲದ್ಭಿರ್ಭಯಾನಕೈಃ ॥ ೬೭ ॥

ಶಕ್ತಿತೋಮರಚಕ್ರಾದ್ಯೈಃ ಸುದೀಪ್ತೈರ್ವಿವಿಧಾಯುಧೈಃ ।
ಪಾಶಶೃಂಖಲದಂಡೈಶ್ಚ ಭೀಷಯಂತೋ ಮಹಾಬಲಾಃ ॥ ೬೮ ॥

ಆಗಚ್ಛಂತಿ ಮಹಾರೌದ್ರಾ ಮರ್ತ್ಯಾನಾಮಾಯುಷಃ ಕ್ಷಯೇ ।
ಗ್ರಹೀತುಂ ಪ್ರಾಣಿನಃ ಸರ್ವೇ ಯಮಸ್ಯಾಜ್ಞಾಕರಾಸ್ತಥಾ ॥ ೬೯ ॥

---

೬೬. ಅವರಲ್ಲಿ ಕೆಲವರಿಗೆ ಎರಡು ತೋಳುಗಳು. ಕೆಲವರಿಗೆ ನಾಲುಕ ತೋಳುಗಳು. ಕೆಲವರಿಗೆ ಹದಿನಾರು ತೋಳುಗಳು. ಇನ್ನು ಕೆಲವರಿಗೆ ಹತ್ತು ಅಥವಾ ಇಪ್ಪತ್ತು ತೋಳುಗಳು.

೬೭. ಕೆಲವರಿಗೆ ತೋಳುಗಳು ಲೆಕ್ಕಕ್ಕೇ ಸಿಗುತ್ತಿರಲಿಲ್ಲ. ಮತ್ತೆ ಕೆಲವರಿಗೆ ಸಾವಿರ ತೋಳುಗಳು. ಅವರು ಹಿಡಿದಿರುವ ಆಯುಧಗಳೂ ವಿಕಾರ ವಾದವುಗಳೇ. ಅವು ಒಂದೊಂದೂ ಉರಿಯುತ್ತಾ ಹೆದರಿಕೆ ಹುಟ್ಟಿಸು ತ್ತಿರುವುದು.

೬೮. ಶಕ್ತಿ, ತೋಮರ, ಚಕ್ರ, ಪಾಶ, ಸರಪಳಿ, ದಂಡ ಮೊದಲಾದ ನಾನಾಬಗೆಯ ಆಯುಧಗಳೇ ಅವು. ಇವನ್ನು ಹಿಡಿದು ಆ ಮಹಾಬಲಶಾಲಿ ಗಳಾದ ಯಮದೂತರು, ಮಾನವರ ಆಯುಸ್ಸು ಮುಗಿದಾಗ, ಯಮನ ಆಜ್ಞೆ ಯನ್ನು ನೆರವೇರಿಸುವುದಕ್ಕಾಗಿಯೂ, ಜೀವರನ್ನು ಕರೆದೊಯ್ಯುವುದಕ್ಕಾಗಿಯೂ, ಹೆದರಿಸುತ್ತಾ ಬರುವರು.

೬೯. ಆ ಯಮದೂತರು, 'ಹಿಂದೆ ಹೇಳಿದಂತೆ ಜೀವನು ತನ್ನ ಕರ್ಮಾ ನುಸಾರವಾಗಿ ಪಡೆಯತಕ್ಕ ಯಾತನಾಶರೀರವನ್ನು ಯಮನಪಟ್ಟಣಕ್ಕೆ ಎಳೆದು ಕೊಂಡು ಹೋಗುವರು.

ಯತ್ತ್ವಚ್ಛರೀರಮಾದತ್ತೇ ಯಾತನೀಯಂ ಸ್ವಕರ್ಮಜಂ ।
ತದಸ್ಯ ನೀಯತೇ ಜಂತೋರ್ಯಮಸ್ಯ ಸದನಂ ಪ್ರತಿ ॥ ೭೦ ॥

ಬದ್ಧ್ವಾ ತತ್ಕಾಲಪಾಶೈಶ್ಚ ನಿಗಡೈರ್ವಜ್ರಶೃಂಖಲೈಃ ।
ತಾಡಯಿತ್ವಾ ಭೃಶಂ ಕ್ರುದ್ಧೈರ್ನೀಯತೇ ಯಮಕಿಂಕರೈಃ ॥ ೭೧ ॥

ಪ್ರಸ್ಖಲಂತಂ ರುದಂತಂ ಚ ಆಕ್ರೋಶಂತಂ ಮುಹುರ್ಮುಹುಃ ।
ಹಾ ತಾತ ಮಾತಃ ಪುತ್ರೇತಿ ವದಂತಂ ಕರ್ಮದೂಷಿತಂ ॥ ೭೨ ॥

ಆಹತ್ಯ ನಿಶಿತೈಃ ಶೂಲೈರ್ಮುದ್ಗರೈರ್ನಿಶಿತೈರ್ಘನೈಃ ।
ಖಡ್ಗಶಕ್ತಿಪ್ರಹಾರೈಶ್ಚ ವಜ್ರದಂಡೈಃ ಸುದಾರುಣೈಃ ॥ ೭೩ ॥

ಭರ್ತ್ಸ್ಯಮಾನೋ ಮಹಾರಾವೈರ್ವಜ್ರಶಕ್ತಿಸಮನ್ವಿತೈಃ ।
ಏಕೈಕಶೋ ಭೃಶಂ ಕ್ರುದ್ಧೈಸ್ತಾಡಯದ್ಭಿಃ ಸಮಂತತಃ ॥ ೭೪ ॥

---

೭೦. ಆ ಯಮಕಿಂಕರರು, ಯಾತನಾದೇಹವನ್ನು ಕಾಲಪಾಶಗಳಿಂದ ಬಿಗಿದು ಕಟ್ಟಿ ವಜ್ರದಂತೆ ಗಟ್ಟಿಯಾದ ಸಂಕೋಲೆಗಳನ್ನು ತೊಡಿಸಿ, ಕೋಪ ದಿಂದ ಸಿಕ್ಕಿದಂತೆ ಹೊಡೆಯುತ್ತಾ ಎಳೆದೊಯ್ಯುವರು.

೭೧–೭೩. ಆಗ ಜೀವನು ಒಮ್ಮೆ ಮುಗ್ಗರಿಸುವನು. ಒಮ್ಮೆ ಅಳು ವನು. ಇನ್ನೊಮ್ಮೆ ಒರಲುವನು. ಬಾರಿಬಾರಿಗೂ, ಅಯ್ಯೋ, ಅಪ್ಪಾ, ಅಮ್ಮಾ, ಮಗೂ, ಎಂದು ಕೂಗಿಕೊಳ್ಳುವನು. ಈರೀತಿ ಪಾಪಕರ್ಮ ಮಾಡಿದ ಜೀವನನ್ನು ಚೂಪಾದ ಶೂಲಗಳಿಂದಲೂ, ದಪ್ಪವಾದ ಮುದ್ಗರಗಳಿಂದಲೂ, ಕತ್ತಿಗಳಿಂದಲೂ, ಶಕ್ತಿಗಳಿಂದಲೂ, ಭಯಂಕರವಾದ ವಜ್ರಮಯವಾದ ದಂಡ ಗಳಿಂದಲೂ ಬಡಿಯುವರು.

೭೪. ವಜ್ರಾಯುಧದಂತೆ ಕರ್ಕಶರಾದ ಆ ದೂತರು ಸುತ್ತಲೂ ನಿಂತು ಗಟ್ಟಿಯಾಗಿ ಕೂಗುತ್ತಾ ಆ ಪಾಪಿಯನ್ನು ಗದರಿಸುವರು. ಮಹಾಕೋಪದಿಂದ ಒಬ್ಬರಾದಮೇಲೆ ಒಬ್ಬರು ಹೊಡೆಯುವರು.

ಸ ಮುಹ್ಯಮಾನೋ ದುಃಖಾರ್ತಃ ಪ್ರತಪಂಶ್ಚ ಇತಸ್ತತಃ ।
ಆಕೃಷ್ಯ ನೀಯತೇ ಜಂತುರಧ್ವಾನಂ ಸುಭಯಂಕರೈಃ ॥ ೭೫ ॥

ಕುಶಕಂಟಕವಲ್ಮೀಕಶಂಕುಪಾಷಾಣಶರ್ಕರೇ ।
ತಥಾ ಪ್ರದೀಪ್ತಜ್ವಲನೇ ಕ್ಷಾರವಜ್ರಶತೋತ್ಕಟೇ ॥ ೭೬ ॥

ಪ್ರದೀಪ್ತಾದಿತ್ಯತಪ್ತೇನ ದಹ್ಯಮಾನಸ್ತದಂಶುಭಿಃ ।
ಕೃಷ್ಯತೇ ಯಮದೂತೈಶ್ಚ ಶಿವಾಸಂನಾದಭೀಷಣೈಃ ॥ ೭೭ ॥

ವಿಕೃಷ್ಯಮಾಣಸ್ತೈರ್ಘೋರೈರ್ಭಕ್ಷ್ಯಮಾಣಃ ಶಿವಾಶತೈಃ ।
ಪ್ರಯಾತಿ ದಾರುಣೇ ಮಾರ್ಗೇ ಪಾಪಕರ್ಮಾ ಯಮಾಲಯಂ ॥ ೭೮ ॥

---

೭೫. ಈರೀತಿಯಾಗಿ ಭಯಂಕರರಾದ ಯಮದೂತರು ಆ ದಾರಿಯಲ್ಲಿ ಎಳೆದೊಯ್ಯುವಾಗ ಜೀವನು ದುಃಖದಿಂದ ಪೀಡಿತನಾಗಿ ಮೂರ್ಛೆಹೋಗುವನು. ಇತ್ತಲಿಂದತ್ತ ಹೊರಳಾಡುವನು.

೭೬-೭೭. ಆ ದಾರಿಯಲ್ಲಿ ಮೊನಚಾದ ದರ್ಭೆಗಳು, ಮುಳ್ಳುಗಳು, ಮೊಳೆಗಳು ಕಾಲಿಗೆ ಚುಚ್ಚುವುವು. ಅಲ್ಲಿ ಅಡಿಗಡಿಗೆ ಹುತ್ತಗಳೂ, ಕಲ್ಲುಗಳೂ, ಸಣ್ಣಸಣ್ಣ ಹರಳುಗಳೂ (ನೊರಜುಗಲ್ಲು) ಇರುವುವು. ಮತ್ತು ಕೆಳಗೆ ಬೆಂಕಿಯು ಉರಿಯುತ್ತಿರುವುದು. ನೂರಾರು 'ಕ್ಷಾರವಜ್ರ' ಗಳೆಂಬುವು ಹರಡಿರುವುವು. ಇದಲ್ಲದೆ ತಲೆಯಮೇಲೆ ಸೂರ್ಯನು ಉರಿಯುತ್ತಿರುವನು. ಆತನ ಕಿರಣಗಳಿಂದ ಮೈಯೆಲ್ಲ ಸುಟ್ಟುಹೋಗುವುದು. ಉದ್ದಕ್ಕೂ ನರಿಗಳು ಭಯವಾಗುವಂತೆ ಅರಚುತ್ತಿರುವುವು.

೭೮. ಪಾಪಿಯಾದ ಜೀವನು ಈರೀತಿ ದಾರುಣವಾದ ಆ ಮಾರ್ಗದಲ್ಲಿ ಯಮದೂತರಿಂದ ಎಳೆಯಲ್ಪಡುತ್ತಲೂ, ನಡುನಡುವೆ ನೂರಾರು ನರಿಗಳಿಂದ ಕಿತ್ತು ತಿನ್ನಲ್ಪಡುತ್ತಲೂ ಮುಂದೆ ಮುಂದೆ ಸಾಗುವನು.

ಕ್ವಚಿತ್ಫ್ರೀತೈಃ ಕ್ವಚಿತ್ರಸ್ತೈಃ ಪ್ರಸ್ಖಲದ್ಭಿಃ ಕ್ವಚಿತ್ಕ್ವಚಿತ್ ।
ದುಃಖೇನಾಕ್ರಂದಮಾನೈಶ್ಚ ಗಂತವ್ಯಃ ಸ ಮಹಾಪಥಃ　　॥ ೭೯ ॥

ನಿರ್ಭತ್ಸ್ಯಮಾನೈರುದ್ವಿಗ್ನೈರ್ವಿದ್ರುತೈರ್ಭಯವಿಹ್ವಲೈಃ ।
ಕಂಪಮಾನಶರೀರೈಸ್ತು ಗಂತವ್ಯಂ ಜೀವಸಂಜ್ಞಕೈಃ　　॥ ೮೦ ॥

ಕಂಟಕಾಕೀರ್ಣಮಾರ್ಗೇಣ ಸಂತಪ್ತಸಿಕತೇನ ಚ ।
ದಹ್ಯಮಾನೈಸ್ತು ಗಂತವ್ಯಂ ನರೈರ್ದಾನವಿವರ್ಜಿತೈಃ　　॥ ೮೧ ॥

ಮೇದಃಶೋಣಿತದುರ್ಗಂಧೈರ್ಬಸ್ತಗಾತ್ರೈಶ್ಚ ಪೂಗಶಃ ।
ದಗ್ಧಸ್ಫುಟಿತ್ವಚಾಕೀರ್ಣೈರ್ಗಂತವ್ಯಂ ಜೀವಘಾತಕೈಃ　　॥ ೮೨ ॥

ಕೂಜದ್ಭಿಃ ಕ್ರಂದಮಾನೈಶ್ಚ ವಿಕ್ರೋಶದ್ಭಿಶ್ಚ ವಿಸ್ವರಂ ।
ವೇದನಾರ್ತೈಶ್ಚ ಸದ್ಭಿಶ್ಚ ಗಂತವ್ಯಂ ಜೀವಘಾತಕೈಃ　　॥ ೮೩ ॥

---

೭೯-೮೦. ಆ ದೀರ್ಘವಾದ ಮಾರ್ಗದಲ್ಲಿ ಜೀವನೆನಿಸಿಕೊಂಡವನು ಪ್ರಯಾಣ ಮಾಡುವಾಗ ಒಂದೆಡೆ ಹೆದರುವನು. ಒಂದೆಡೆ ನಡುಗುವನು. ಒಂದೊಂದೆಡೆ ಮುಗ್ಗರಿಸುವನು. ಒಂದೊಂದುಸಲ ಸಹಿಸಲಾರದೆ ದುಃಖದಿಂದ ಅರಚಿಕೊಳ್ಳುವನು. ಆಗ ಅವನನ್ನು ಯಮದೂತರು ಗದರಿಸುವರು. ಆಗ ಅವನಿಗೆ ಮನಸ್ಸು ತಳಮಳಗೊಳ್ಳುವುದು. ಭಯದಿಂದ ಕಾತರನಾಗಿ ಓಡಿ ಓಡಿ ಹೋಗುವನು. ಆಗವನ ದೇಹವು ಗಡಗಡನೆ ನಡುಗತೊಡಗುವುದು.

೮೧. ಮಾನವ ಜನ್ಮದಲ್ಲಿ ಯಾವನು ದಾನವನ್ನು ಮಾಡದಿರುವನೋ ಆ ಪಾಪಿಯು, ಮುಳ್ಳುಗಳಿಂದ ನಿಬಿಡವಾಗಿಯೂ, ಕಾದ ಮರಳಿನಿಂದ ಕೂಡಿದುದಾಗಿಯೂ ಇರುವ ದಾರಿಯಲ್ಲಿ ಬೇಯುತ್ತಾ ಹೋಗಬೇಕಾಗುವುದು.

೮೨. ಯಾವನು ಪ್ರಾಣಿಹತ್ಯೆ ಮಾಡುವನೋ ಅವನ ದೇಹದಿಂದ ಮೇದಸ್ಸು, ರಕ್ತಗಳು ಕಿತ್ತುಕೊಂಡು ದುರ್ಗಂಧವುಂಟಾಗುವುದು. ಮೈಕೈಯೆಲ್ಲವೂ ಕಿತ್ತುಹೋಗುವುವು. ಮೈಮೇಲಿನ ಚರ್ಮವೆಲ್ಲವೂ ಸುಟ್ಟುಹೋಗಿ ಬೊಬ್ಬೆಗಳುಂಟಾಗುವುವು

೮೩. ಆಗ ಅವನು ಕೂಗುವನು. ಅಳುವನು, ಅಪಸ್ವರವಾಗಿ ಅರಚಿಕೊಳ್ಳುವನು. ವೇದನೆಯನ್ನು ತಡೆಯಲಾರದೆ ಹೋಗುವನು.

ಶಕ್ತಿಭಿರ್ಭಿಂದಿಪಾಲೈಶ್ಚ ಖಡ್ಗತೋಮರಸಾಯಕೈಃ ।
ಭಿನ್ನೈಧ್ಭಿಸ್ತೀಕ್ಷ್ಣಶೂಲಾಗ್ರೈರ್ಗಂತವ್ಯಂ ಜೀವಘಾತಕೈಃ ॥ ೮೪

ಶ್ವಾನೈರ್ವ್ಯಾಘ್ರೈರ್ವೃಕೈಃ ಕಂಕೈರ್ಭಕ್ಷ್ಯಮಾಣೈಶ್ಚ ಪಾಪಿಭಿಃ ॥ ೮೫ ॥

ಕೃಂತದ್ಭಿಃ ಕ್ರಕಚಾಘಾತೈರ್ಗಂತವ್ಯಂ ಮಾಂಸಖಾದಿಭಿಃ ।
ಮಹಿಷರ್ಷಭಶೃಂಗಾಗ್ರೈರ್ಭಿದ್ಯಮಾನೈಃ ಸಮಂತತಃ ॥ ೮೬ ॥

ಉಲ್ಲಿಖದ್ಭಿಃ ಶೂಕರೈಶ್ಚ ಗಂತವ್ಯಂ ಮಾಂಸಖಾದಕೈಃ ।
ಸೂಚೀಭ್ರಮರಕಾಕೋಲಮಕ್ಷಿಕಾಭಿಶ್ಚ ಸಂಘಶಃ ॥ ೮೭ ॥

ಭುಜ್ಯಮಾನೈಶ್ಚ ಗಂತವ್ಯಂ ಪಾಪಿಷ್ಠೈರ್ಮಧುಘಾತಕೈಃ ।
ವಿಶ್ವಸ್ತಂ ಸ್ವಾಮಿನಂ ಮಿತ್ರಂ ಸ್ತ್ರಿಯಂ ವಾ ಯಸ್ತು ಘಾತಯೇತ್ ॥ ೮೮ ॥

---

೮೪-೮೫. ಆ ಜೀವನನ್ನು ಯಮದೂತರು ಶಕ್ತಿಗಳಿಂದಲೂ, ಭಿಂದಿ ಪಾಲಗಳಿಂದಲೂ, ಕತ್ತಿಗಳಿಂದಲೂ, ತೋಮರಗಳಿಂದಲೂ, ಬಾಣಗಳಿಂದಲೂ, ಮೊನಚಾದ ಶೂಲಗಳಿಂದಲೂ ಇರಿಯುವರು. ಅಲ್ಲದೆ ಆ ಪಾಪಿಯನ್ನು ನಾಯಿಗಳೂ, ಹುಲಿಗಳೂ, ತೋಳಗಳೂ, ಕಂಕಗಳೂ ಕಿತ್ತು ತಿನ್ನುವುವು.

೮೬. ಯಾರು ಮಾಂಸವನ್ನು ತಿನ್ನುವರೋ ಆ ಪಾಪಿಗಳನ್ನು ಗರಗಸದಿಂದ ಕೊಯ್ಯುವರು. ಮತ್ತು ಸುತ್ತಲೂ, ಕೋಣಗಳೂ, ಗೂಳಿಗಳೂ ತಮ್ಮ ತಮ್ಮ ಕೋಡುಗಳಿಂದ ಚುಚ್ಚುವುವು.

೮೭. ಅಲ್ಲದೆ ಅವರನ್ನು ಮುಳ್ಳುಹಂದಿಗಳು ತಮ್ಮ ಮುಳ್ಳುಗಳಿಂದ ಪರಚಿಕೊಂಡುಹೋಗುವುವು. ಮತ್ತು ಗುಂಪುಗುಂಪಾಗಿ, ಸೂಜಿಯಂತೆ ಮೂತಿಯಿರುವ ದುಂಬಿಗಳೂ, ಕಾಗೆಗಳೂ, ನೊಣಗಳೂ ಚುಚ್ಚತೊಡಗುವುವು. ಹೀಗೆಯೇ ಅವರು ಪ್ರಯಾಣಮಾಡಬೇಕು.

೮೮. ಯಾವ ಪಾಪಿಗಳು ಮದ್ಯವನ್ನು ಸೇವಿಸುವರೋ, ಮತ್ತು ನಂಬಿದ ಸ್ವಾಮಿಯನ್ನಾಗಲಿ, ಸ್ನೇಹಿತನನ್ನಾಗಲಿ, ಸ್ತ್ರೀಯನ್ನಾಗಲಿ ಹಾಳು ಮಾಡುವರೋ ಅಂಥವರು ಆ ಯಮ ಮಾರ್ಗದಲ್ಲಿ ಹೋಗುವಾಗ ಕಿತ್ತು ತಿನ್ನಲ್ಪಡುವರು.

ಶಸ್ತ್ರೈರ್ನಿಕೃತ್ಯಮಾನೈಶ್ಚ ಗಂತವ್ಯಂ ಚಾತುರೈರ್ನರೈಃ ।
ಘಾತಯಂತಿ ಚ ಯೇ ಜಂತೂಸ್ತಾಡಯಂತಿ ನಿರಾಗಸಃ ॥ ೮೯ ॥

ರಾಕ್ಷಸೈರ್ಭಕ್ಷ್ಯಮಾಣಾಸ್ತೇ ಯಾಂತಿ ಯಾಮ್ಯಪಥಂ ನರಾಃ ।
ಯೇ ಹರಂತಿ ಪರಸ್ತ್ರೀಣಾಂ ವರಪ್ರಾವರಣಾನಿ ಚ ॥ ೯೦ ॥

ತೇ ಯಾಂತಿ ವಿದ್ರುತಾ ನಗ್ನಾಃ ಪ್ರೇತೀಭೂತಾ ಯಮಾಲಯಂ ।
ವಾಸೋ ಧಾನ್ಯಂ ಹಿರಣ್ಯಂ ವಾ ಗೃಹಕ್ಷೇತ್ರಮಥಾಪಿ ವಾ ॥ ೯೧ ॥

ಯೇ ಹರಂತಿ ದುರಾತ್ಮಾನಃ ಪಾಪಿಷ್ಠಾಃ ಪಾಪಕರ್ಮಿಣಃ ।
ಪಾಷಾಣೈರ್ಲಗುಡೈರ್ದಂಡೈಸ್ತಾಡ್ಯಮಾನೈಸ್ತು ಜರ್ಜರೈಃ ॥ ೯೨ ॥

ವಹದ್ಭಿಃ ಶೋಣಿತಂ ಭೂರಿ ಗಂತವ್ಯಂ ತು ಯಮಾಲಯಂ ।
ಬ್ರಹ್ಮಸ್ವಂ ಯೇ ಹರಂತೀಹ ನರಾ ನರಕನಿರ್ಭಯಾಃ ॥ ೯೩ ॥

---

೮೯. ಯಾರು, ತಪ್ಪಿಲ್ಲದ ಜನರನ್ನು ನಿಷ್ಕಾರಣವಾಗಿ ಹೊಡೆಯುವರೋ ಇಲ್ಲವೇ ಕೊಲ್ಲುವರೋ ಅಂತಹ ಪಾಪಿಗಳು ಆ ದಾರಿಯಲ್ಲಿ ನಡೆಯುವಾಗ ಆಯುಧಗಳಿಂದ ಕತ್ತರಿಸಲ್ಪಡುತ್ತಾ ದುಃಖಿತರಾಗುವರು.

೯೦ ಯಾವ ಮನುಜರು ಪರಸ್ತ್ರೀಯರ ವಸ್ತ್ರಭೂಷಣಗಳನ್ನು ಕಸಿದುಕೊಳ್ಳುವರೋ ಅವರು ಆ ಯಮಪಥದಲ್ಲಿ ಹೋಗುವಾಗ ರಾಕ್ಷಸರಿಂದ ಭಕ್ಷಿಸಲ್ಪಡುವರು.

೯೧-೯೩. ಯಾರು ಪಾಪಕರ್ಮಗಳಲ್ಲೇ ಸರ್ವದಾ ನಿರತರಾಗಿ, ಕೇಡಿಗತನದಿಂದ ವಸ್ತ್ರಗಳನ್ನೋ, ಅಥವಾ ಧಾನ್ಯವನ್ನೋ ಇಲ್ಲವೇ ಸುವರ್ಣವನ್ನೋ, ಇಲ್ಲದಿದ್ದರೆ ಮನೆಮಠಗಳನ್ನೋ ಅದೂ ಅಲ್ಲದಿದ್ದರೆ ಹೊಲಗದ್ದೆಗಳನ್ನೋ ಅಪಹರಿಸುತ್ತಾರೆಯೋ ಅವರು ಸತ್ತನಂತರ ಉಡುವುದಕ್ಕೂ ಬಟ್ಟೆಯಿಲ್ಲದೆ ಬೆತ್ತಲೆಯಾಗಿಯೇ ಯಮಪುರಿಗೆ ಓಡುವರು. ಮತ್ತು ಯಾರು ನರಕದ ಭೀತಿಯೇ ಇಲ್ಲದೆ ಬ್ರಹ್ಮಸ್ವವನ್ನು ಅಪಹರಿಸುವರೋ ಆ ಪಾಪಿಗಳು ಯಮ ಮಾರ್ಗದಲ್ಲಿ ನಡೆಯುವಾಗ ಅವರನ್ನು ಕಲ್ಲುಗಳಿಂದಲೂ, ದೊಣ್ಣೆಗಳಿಂದಲೂ, ಗುದಿಗೆಗಳಿಂದಲೂ, ಅಜ್ಜಿಬಜ್ಜಿಯಾಗುವಂತೆ ಬಡಿಯುವರು. ಆ ಬಡಿತದಿಂದ ಹೆಚ್ಚುಹೆಚ್ಚಾಗಿ ರಕ್ತವು ಸುರಿಯುತೊಡಗುವುದು.

ತಾಡಯಂತಿ ತಥಾ ವಿಪ್ರಾನಾಕ್ರೋಶಂತಿ ನರಾಧಮಾಃ ।
ಶುಷ್ಕಕಾಷ್ಠನಿಬದ್ಧಾಸ್ತೇ ಛಿನ್ನಕರ್ಣಾಕ್ಷಿನಾಸಿಕಾಃ ॥ ೯೪ ॥

ಪೂಯಶೋಣಿತದಿಗ್ಧಾಸ್ತೇ ಕಾಲಗೃಧ್ರೈಶ್ಚ ಜಂಬುಕೈಃ ।
ಕಿಂಕರೈರ್ಭೀಷಣೈಶ್ಚಂಡೈಸ್ತಾಡ್ಯಮಾನಾಶ್ಚ ದಾರುಣೈಃ ॥ ೯೫ ॥

ವಿಕ್ರೋಶಮಾನಾ ಗಚ್ಛಂತಿ ಪಾಪಿನಸ್ತೇ ಯಮಾಲಯಂ ।
ಏವಂ ಪರಮದುರ್ಧರ್ಷಮಧ್ವಾನಂ ಜ್ವಲನಪ್ರಭಂ ॥ ೯೬ ॥

ರೌರವಂ ದುರ್ಗವಿಷಮಂ ನಿರ್ದಿಷ್ಟಂ ಮಾನುಷಸ್ಯ ಚ ।
ಪ್ರತಪ್ತತಾಮ್ರವರ್ಣಾಭಂ ವಹ್ನಿಜ್ವಾಲಾಸ್ಫುಲಿಂಗವತ್ ॥ ೯೭ ॥

ಕುರಂಟಕಂಟಕಾಕೀರ್ಣಂ ಪೃಥುವಿಕಟಿತಾಡನೈಃ ।
ಶಕ್ತಿವಜ್ರೈಶ್ಚ ಸಂಕೀರ್ಣಮುಜ್ಜ್ವಲಂ ತೀವ್ರಕಂಟಕಂ ॥ ೯೮ ॥

---

೯೪–೯೬. ಯಾವ ನರಾಧಮರು ಬ್ರಾಹ್ಮಣರನ್ನು ಹೊಡೆಯುವರೋ ಮತ್ತು ಬಾಯಿಗೆ ಬಂದಂತೆ ಬೈಯುವರೋ ಆ ಪಾಪಿಗಳನ್ನು ಅತಿಕೋಪ ಸ್ವಭಾವದವರೂ, ಭಯಂಕರಾಕಾರರೂ ಆದ ಯಮಕಿಂಕರರು ಒಣ ಮರವೊಂದಕ್ಕೆ ಕಟ್ಟಿಹಾಕಿ, ಕಣ್ಣುಗಳನ್ನು ಚುಚ್ಚಿ, ಕಿವಿಮೂಗುಗಳನ್ನು ಕುಯ್ದುಹಾಕುವರು. ಮತ್ತು ಅವರನ್ನು ಕರಾಳವಾದ ಗೃಧ್ರಗಳೂ, ನರಿಗಳೂ ಹಿಂಸಿಸುವುವು. ಆಗವರಿಗೆ ಮೈಮೇಲೆಲ್ಲಾ ಕೀವು ರಕ್ತಗಳು ಕಿತ್ತುಕೊಳ್ಳುವುದು. ಆಗ ಅವರು ಗಟ್ಟಿಯಾಗಿ ಕಿರಿಚಿಕೊಳ್ಳುವರು. ಈರೀತಿಯಾಗಿ ಆ ಯಮಮಾರ್ಗವು ಬಹು ದುರ್ಗಮವಾದುದು.

೯೭–೧೦೩. ಆ ಮಾರ್ಗವು ರೌರವದಂತೆ ಬಹು ದುರ್ಗಮವಾಗಿರುವುದು. ಅದು ಕಾಸಿದ ತಾಮ್ರದಂತೆಯೂ, ಉರಿಯುತ್ತಿರುವ ಬೆಂಕಿಯ ಜ್ವಾಲೆಯ ಕಿಡಿಗಳಂತೆಯೂ ಕೆಂಪಗಾಗಿರುವುದು. ಅಲ್ಲಿ ಉದ್ದಕ್ಕೂ ಗೋರಂಟಿಯ ಮುಳ್ಳುಗಳೂ, ದಪ್ಪವಾಗಿಯೂ, ಒರಟುಮುರಟಾಗಿಯೂ ಇರುವ ಶಕ್ತಿ, ವಜ್ರಗಳ ಮೊನೆಗಳೂ, ಇನ್ನೂ ಇತರ ಚೂಪಾದ ಮುಳ್ಳುಗಳೂ ಹರಡಿರುವುವು.

ಅಂಗಾರವಾಲುಕಾಮಿಶ್ರಂ ವಹ್ನಿಕೀಟಕದುರ್ಗಮಂ ।
ಜ್ವಾಲಾಮಾಲಾಕುಲಂ ರೌದ್ರಂ ಸೂರ್ಯರಶ್ಮಿಪ್ರತಾಪಿತಂ ॥ ೯೯ ॥

ಅಧ್ವಾನಂ ನೀಯತೇ ದೇಹಿ ಕೃಷ್ಯಮಾಣಃ ಸುನಿಷ್ಠುರೈಃ ।
ಯದ್ಯೈವ ಕ್ರಂದತೇ ಜಂತುರ್ದುಃಖಾರ್ತಃ ಪತಿತಃ ಕ್ವಚಿತ್ ॥ ೧೦೦ ॥

ತದ್ವೈವಾಹನ್ಯತೇ ಸರ್ವೈರಾಯುಧೈರ್ಯಮಕಿಂಕರೈಃ ।
ಏವಂ ಸಂತಾಡ್ಯಮಾನಶ್ಚ ಲುಬ್ಧಃ ಪಾಪೇಷು ಯೋಽನಯಃ ॥ ೧೦೧ ॥

ಅವಶೋ ನೀಯತೇ ಜಂತುರ್ದುರ್ಧರ್ರೈರ್ಯಮಕಿಂಕರೈಃ ।
ಸರ್ವೈರೇವ ಹಿ ಗಂತವ್ಯಮಧ್ವಾನಂ ತತ್ಸುದುರ್ಗಮಂ ॥ ೧೦೨ ॥

ನೀಯತೇ ವಿವಿಧೈರ್ಘೋರೈರ್ಯಮದೂತೈರವಜ್ಞಯಾ ।
ನೀತ್ವಾ ಸುದಾರುಣಂ ಮಾರ್ಗಂ ಪ್ರಾಣಿನಂ ಯಮಕಿಂಕರೈಃ ॥ ೧೦೩ ॥

---

ಅಲ್ಲದೆ ಅಲ್ಲಿ ಕಾದಮರಳು, ವಹ್ನಿಕೀಟವೆಂಬ ಹುಳುಗಳು ಬೇರೆ ಪೀಡಿಸುವುವು. ಆ ದಾರಿಯಲ್ಲಿ ಜ್ವಾಲೆಗಳು ಏಳುತ್ತಿರುವುವು. ಮೇಲುಗಡೆ ಸೂರ್ಯನು ಜೋರಾಗಿ ಉರಿಯುತ್ತಿರುವನು. ಇಂಥಹ ದಾರಿಯಲ್ಲಿ ಜೀವನನ್ನು ನಿಷ್ಕರುಣರಾದ ಯಮಭಟರು ಎಳೆದುಕೊಂಡು ಹೋಗುವರು. ಆ ಪ್ರಾಣಿಯು ಎಲ್ಲಾದರೂ ಒಂದುಕಡೆ ಆ ದುಃಖವನ್ನು ತಡೆಯಲಾರದೆ ಬಿದ್ದು ಅತ್ತುದೇ ಆದರೆ, ಯಮಕಿಂಕರರು ತಮ್ಮ ಬಳಿಯಿರುವ ನಾನಾಬಗೆಯ ಆಯುಧಗಳಿಂದ ಆಕ್ಷಣವೇ ಪ್ರಹರಿಸುವರು. ಯಾವನು ನೀತಿಬಾಹಿರನಾಗಿ ಪಾಪಕೆಲಸಗಳಲ್ಲೇ ಇಚ್ಛಾಪೂರ್ವಕವಾಗಿ ನಿರತನಾಗಿರುವನೋ ಅಂತಹ ಪಾಪಿಯು ಈರೀತಿಯಾಗಿ ಕ್ರೂರರಾದ ಯಮಕಿಂಕರರ ಕೈಗೆ ಸಿಕ್ಕಿ ಏಟುಗಳನ್ನು ತಿನ್ನುತ್ತಾ ಸುಮ್ಮನೆ ಎಳೆದೊಯ್ಯಲ್ಪಡುವನು. ಈರೀತಿ ದುರ್ಗಮವಾದ ಹಾದಿಯನ್ನು ಎಲ್ಲರೂ ತುಳಿಯಲೇಬೇಕು.

೧೦೩. ಇಂಥಹ ದಾರಿಯಲ್ಲಿ ಘೋರಾಕಾರರಾದ ನಾನಾರೀತಿಯ ಯಮಕಿಂಕರರು ಜೀವನನ್ನು ತಿರಸ್ಕಾರದಿಂದ ಎಳೆದೊಯ್ಯುವರು.

ಪ್ರವೇಕ್ಷ್ಯತೇ ಪುರೀಂ ಘೋರಾಂ ತಾಮ್ರಾಯಸಮಯೀಂ ದ್ವಿಜಾಃ ।
ಸಾ ಪುರೀ ವಿಪುಲಾಕಾರಾ ಲಕ್ಷಯೋಜನಮಾಯತಾ ॥ ೧೦೪ ॥

ಚತುರಸ್ರಾ ವಿನಿರ್ದಿಷ್ಟಾ ಚತುರ್ದ್ವಾರವತೀ ಶುಭಾ ।
ಪ್ರಾಕಾರಾಃ ಕಾಂಚನಾಸ್ತಸ್ಯಾ ಯೋಜನಾಯುತಮುಚ್ಛ್ರಿತಾಃ ॥ ೧೦೫ ॥

ಇಂದ್ರನೀಲಮಹಾನೀಲಪದ್ಮರಾಗೋಪಶೋಭಿತಾ ।
ಸಾ ಪುರೀ ವಿವಿಧೈಃ ಸಂಘೈರ್ಘೋರಾ ಘೋರೈಃ ಸಮಾಕುಲಾ ॥ ೧೦೬ ॥

ದೇವದಾನವಗಂಧರ್ವೈರ್ಯಕ್ಷರಾಕ್ಷಸಪನ್ನಗೈಃ ।
ಪೂರ್ವದ್ವಾರಂ ಶುಭಂ ತಸ್ಯಾಃ ಪತಾಕಾಶತಶೋಭಿತಂ ॥ ೧೦೭ ॥

ವಜ್ರೇಂದ್ರನೀಲವೈದೂರ್ಯಮುಕ್ತಾಫಲವಿಭೂಷಿತಂ ।
ಗೀತನೃತ್ಯೈಃ ಸಮಾಕೀರ್ಣಂ ಗಂಧರ್ವಾಪ್ಸರಸಾಂ ಗಣೈಃ ॥ ೧೦೮ ॥

---

೧೦೪. ಅನಂತರ ತಾಮ್ರದಿಂದಲೂ, ಕಬ್ಬಿಣದಿಂದಲೂ ನಿರ್ಮಿತವಾದ ಯಮಪುರಿಗೆ ಆ ಜೀವನನ್ನು ಕರೆದುಕೊಂಡು ಹೋಗುವರು. ಯಮಪುರಿಯು ಬಹಳ ವಿಶಾಲವಾಗಿ ಲಕ್ಷಯೋಜನಗಳಷ್ಟು ವಿಸ್ತಾರವಾಗಿರುವುದು.

೧೦೫. ಆ ನಗರವು ಚಚ್ಚೌಕವಾಗಿ ನಾಲ್ಕು ಹೆಬ್ಬಾಗಿಲುಗಳನ್ನೊಳಗೊಂಡಿರುವುದು. ಅದರ ಕೋಟೆಯ ಗೋಡೆಗಳು ಚಿನ್ನದಿಂದ ಮಾಡಲ್ಪಟ್ಟು ಒಂದೊಂದೂ ಹತ್ತುಸಾವಿರ ಯೋಜನಗಳಷ್ಟು ಎತ್ತರವಾಗಿರುವುವು.

೧೦೬. ಮತ್ತು ಆ ಪಟ್ಟಣದಲ್ಲಿ ಇಂದ್ರನೀಲಗಳೂ, ಮಹಾನೀಲಗಳೂ, ಪದ್ಮರಾಗ ಮಣಿಗಳೂ ಹೇರಳವಾಗಿರುವುವು. ಅಲ್ಲದೆ ಅದರಲ್ಲಿ ಘೋರಾಕಾರರಾದ ವಿವಿಧರೀತಿಯ ದೇವತೆಗಳೂ, ದಾನವರೂ, ಗಂಧರ್ವರೂ, ಯಕ್ಷರೂ, ರಾಕ್ಷಸರೂ, ಪನ್ನಗರೂ ತುಂಬಿ ಬಹು ಘೋರವಾಗಿರುವುದು.

೧೦೭-೧೦೮. ಆ ನಗರದ ಪೂರ್ವದಿಕ್ಕಿನ ಹೆಬ್ಬಾಗಿಲು ನೂರಾರು ಧ್ವಜಗಳಿಂದ ರಮಣೀಯವಾಗಿರುವುದು. ಆ ದ್ವಾರಕ್ಕೆ ವಜ್ರ, ಇಂದ್ರನೀಲ, ವೈಢೂರ್ಯ, ಮುತ್ತು ಮೊದಲಾದ ರತ್ನಗಳಿಂದ ಅಲಂಕಾರ ಮಾಡಿರುವರು. ಅಲ್ಲಿ ಗುಂಪುಗುಂಪಾಗಿ ಗಂಧರ್ವರು ಹಾಡುತ್ತಲೂ ಅಪ್ಸರೆಯರು ನೃತ್ಯ ಮಾಡುತ್ತಲೂ ಇರುವರು.

ಪ್ರವೇಶಸ್ತೇನ ದೇವಾನಾಮೃಷೀಣಾಂ ಯೋಗಿನಾಂ ತಥಾ ।
ಗಂಧರ್ವಸಿದ್ಧಯಕ್ಷಾಣಾಂ ವಿದ್ಯಾಧರವಿಸರ್ಪಿಣಾಂ ॥ ೧೦೯ ॥

ಉತ್ತರಂ ನಗರದ್ವಾರಂ ಘಂಟಾಚಾಮರಭೂಷಿತಂ ।
ಛತ್ರಚಾಮರವಿನ್ಯಾಸಂ ನಾನಾರತ್ನೈರಲಂಕೃತಂ ॥ ೧೧೦ ॥

ವಿಣಾರೇಣುರವೈ ರಮ್ಯೈರ್ಗೀತಮಂಗಲನಾದಿತೈಃ ।
ಋಗ್ಯಜುಃಸಾಮನಿರ್ಘೋಷೈರ್ಮುನಿವೃಂದಸಮಾಕುಲಂ ॥ ೧೧೧ ॥

ವಿಶಂತಿ ಯೇನ ಧರ್ಮಜ್ಞಾಃ ಸತ್ಯವ್ರತಪರಾಯಣಾಃ ।
ಗ್ರೀಷ್ಮೇ ವಾರಿಪ್ರದಾ ಯೇ ಚ ಶೀತೇ ಚಾಗ್ನಿಪ್ರದಾ ನರಾಃ ॥ ೧೧೨ ॥

ಶ್ರಾಂತಸಂವಾಹಕಾ ಯೇ ಚ ಪ್ರಿಯವಾದರತಾಶ್ಚ ಯೇ ।
ಯೇ ಚ ದಾನರತಾಃ ಶೂರಾ ಮಾತಾಪಿತೃಪರಾಶ್ಚ ಯೇ ॥ ೧೧೩ ॥

---

೧೦೯. ಆ ಬಾಗಿಲಿನಿಂದ ದೇವತೆಗಳು, ಋಷಿಗಳು, ಯೋಗಿಗಳು, ಗಂಧರ್ವರು, ಸಿದ್ಧರು, ಯಕ್ಷರು, ವಿದ್ಯಾಧರರು, ಪನ್ನಗರು ಮಾತ್ರ ಪ್ರವೇಶಮಾಡುವರು.

೧೧೦. ಆ ನಗರದ ಉತ್ತರ ದ್ವಾರಕ್ಕೆ ಗಂಟೆಗಳು, ಚಾಮರಗಳು, ಛತ್ರಿಗಳು ಕಟ್ಟಲ್ಪಟ್ಟು, ಬಗೆಬಗೆಯ ರತ್ನಗಳಿಂದ ಅಲಂಕೃತವಾಗಿರುವುದು.

೧೧೧. ಅಲ್ಲದೆ ವೀಣೆ, ವೇಣು, ಗೀತ, ಮಂಗಲನಾದ, ಇವುಗಳ ಮಂಜುಳಧ್ವನಿಯೂ, 'ಋಕ್ಕು, ಯಜುಸ್ಸು, ಸಾಮ' ಈ ವೇದಗಳ ಪವಿತ್ರ ಘೋಷವೂ ತುಂಬಿರುವುದು. ಮತ್ತು ಮುನಿಗಳು ಗುಂಪುಗುಂಪಾಗಿ ಓಡಾಡುತ್ತಿರುವರು.

೧೧೨–೧೧೪. ಈ ಮಾರ್ಗದಿಂದ ಧರ್ಮಜ್ಞರೂ, ಸತ್ಯವ್ರತಧಾರಿಗಳೂ, ಬಿಸಿಲುಗಾಲದಲ್ಲಿ ಶೀತಲವಾದ ಉದಕವನ್ನು ದಾನಮಾಡಿದವರೂ, ಚಳಿಗಾಲ ದಲ್ಲಿ ಶಾಖವಾಗುವಂತೆ ಬೆಂಕಿ ಮೊದಲಾದುದನ್ನು ಒದಗಿಸಿದವರೂ, ಮಾರ್ಗಾ ಯಾಸದಿಂದ ಬಳಲಿರುವವರ ಕಾಲುಗಳನ್ನೊತ್ತಿ ಉಪಚರಿಸಿದವರೂ, ಪ್ರಿಯ

ದ್ವಿಜಶುಶ್ರೂಷಣೇ ಯುಕ್ತಾ ನಿತ್ಯಂ ಯೇಽತಿಥಿಪೂಜಕಾಃ ।
ಪಶ್ಚಿಮಂ ತು ಮಹಾದ್ವಾರಂ ಪುರ್ಯಾ ರತ್ನೈರ್ವಿಭೂಷಿತಂ ॥ ೧೧೪ ॥

ವಿಚಿತ್ರಮಣಿಸೋಪಾನಂ ತೋಮರೈಃ ಸಮಲಂಕೃತಂ ।
ಭೇರೀಮೃದಂಗಸಂನಾದೈಃ ಶಂಖಕಾಹಲನಾದಿತಂ ॥ ೧೧೫ ॥

ಸಿದ್ಧವೃಂದೈಃ ಸದಾ ಹೃಷ್ಟೈರ್ಮಂಗಲ್ಯೈಃ ಪ್ರಣಿನಾದಿತಂ ।
ಪ್ರವೇಶಸ್ತೇನ ಹೃಷ್ಟಾನಾಂ ಶಿವಭಕ್ತಿಮತಾಂ ನೃಣಾಂ ॥ ೧೧೬ ॥

ಸರ್ವತೀರ್ಥಪ್ಲುತಾ ಯೇ ಚ ಪಂಚಾಗ್ನೇರ್ಯೇ ಚ ಸೇವಕಾಃ ।
ಪ್ರಸ್ಥಾನೇ ಯೇ ಮೃತಾ ವೀರಾ ಮೃತಾಃ ಕಾಲಂಜರೇ ಗಿರೌ ॥ ೧೧೭ ॥

ಅಗ್ನೌ ವಿಪನ್ನಾ ಯೇ ವೀರಾಃ ಸಾಧಿತಂ ಯೈರನಾಶಕಂ ।
ಯೇ ಸ್ವಾಮಿಮಿತ್ರಲೋಕಾರ್ಥೇ ಗೋಗ್ರಹೇ ಸಂಕುಲೇ ಹತಾಃ ॥ ೧೧೮ ॥

---

ವಾದಿಗಳೂ, ದಾನಶೀಲರೂ, ಮಾತಾಪಿತೃಸೇವಾತತ್ಪರರೂ, ಬ್ರಾಹ್ಮಣ ಶುಶ್ರೂಷಾನಿರತರೂ, ಅತಿಥಿಸತ್ಕಾರಪ್ರಿಯರೂ ಆದ ಪುಣ್ಯಜೀವಿಗಳು ಪ್ರವೇಶ ಮಾಡುವರು.

೧೧೫-೧೧೮. ಆ ಯಮನಗರದ ಪಶ್ಚಿಮದಿಕ್ಕಿನ ಹೆಬ್ಬಾಗಿಲು ರತ್ನ ಗಳಿಂದ ಅಲಂಕರಿಸಲ್ಪಟ್ಟಿರುವುದು. ಅದಕ್ಕೆ ಮಣಿಮಯವಾದ ಮೆಟ್ಟಲು ಗಳಿರುವುವು. ಅಲ್ಲದೆ ಅಂದವಾಗಿರುವಂತೆ ತೋಮರಗಳನ್ನು ಅಲ್ಲಿ ತೂಗು ಬಿಟ್ಟಿರುವರು. ಅಲ್ಲಿ ಭೇರಿ, ಮೃದಂಗ, ಶಂಖ, ಕಹಳೆ ಮೊದಲಾದುವುಗಳು ಮೊಳಗುತ್ತಿರುವುವು. ಮತ್ತು ಸಿದ್ಧರು ಗುಂಪುಗುಂಪಾಗಿ ಸರ್ವದಾ ಸಂತೋಷ ದಿಂದ ಮಂಗಲಗೀತಗಳನ್ನು ಹಾಡುತ್ತಿರುವರು. ಈ ದ್ವಾರದಲ್ಲಿ, ಶಿವನಲ್ಲಿ ಭಕ್ತಿಯನ್ನು ನೆಲೆಸಿರುವವರೂ, ಸಕಲ ತೀರ್ಥಗಳಲ್ಲಿ ಸ್ನಾನಮಾಡಿದವರೂ, ಪಂಚಾಗ್ನಿಗಳ ನಡುವೆ ತಪಸ್ಸುಮಾಡಿದವರೂ, ಮಹಾಯಾತ್ರೆಗಾಗಿ ಹೊರಟು ಮಧ್ಯೆ ಮೃತರಾದವರೂ, ಕಾಲಂಜರಪರ್ವತದಲ್ಲಿ ತಮ್ಮ ಪ್ರಾಣವನ್ನು ಬಿಟ್ಟವರೂ, ಅಗ್ನಿಯಲ್ಲಿ ಪ್ರಾಣತೆತ್ತ ವೀರರೂ, ಅಹಿಂಸಾವ್ರತವನ್ನು ಸಾಧಿಸಿ ದವರೂ ಮತ್ತು ತಮ್ಮ ಪ್ರಭುವಾಗಿಯೂ, ಸ್ನೇಹಿತನಾಗಿಯೂ, ಪ್ರಜೆಗಳಿಗೋ ಸ್ಕರವಾಗಿಯೂ, ಕದ್ದೊಯ್ದ ಗೋವುಗಳನ್ನು ಬಿಡಿಸಿಕೊಂಡು ಬರುವುದ ಕ್ಕಾಗಿ ಯುದ್ಧದಲ್ಲಿ ಹೋರಾಡಿ, ಮಡಿದುಹೋದ ಶೂರರೂ, ಮಹಾ ತಪಸ್ವಿಗಳೂ, ಪ್ರವೇಶಿಸುವರು.

**ತೇ ವಿಶಂತಿ ನರಾಃ ಶೂರಾಃ ಪಶ್ಚಿಮೇನ ತಪೋಧನಾಃ ।**
**ಪುರ್ಯಾಂ ತಸ್ಯಾ ಮಹಾಘೋರಂ ಸರ್ವಸತ್ತ್ವಭಯಂಕರಂ ॥ ೧೧೯ ॥**

**ಹಾಹಾಕಾರಸಮಾಕ್ರುಷ್ಟಂ ದಕ್ಷಿಣಂ ದ್ವಾರಮೀದೃಶಂ ।**
**ಅಂಧಕಾರಸಮಾಯುಕ್ತಂ ತೀಕ್ಷ್ಣಶೃಂಗೈಃ ಸಮನ್ವಿತಂ ॥ ೧೨೦ ॥**

**ಕಂಟಕೈರ್ವೃಶ್ಚಿಕೈಃ ಸರ್ಪೈರ್ವಜ್ರಕೀಟೈಃ ಸುದುರ್ಗಮೈಃ ।**
**ವಿಲುಂಪದ್ಭಿರ್ವೃಕೈರ್ವ್ಯಾಘ್ರೈರೃಕ್ಷೈಃ ಸಿಂಹೈಃ ಸಜಂಬುಕೈಃ ॥ ೧೨೧ ॥**

**ಶ್ವಾನಮಾರ್ಜಾರಗೃಧ್ರೈಶ್ಚ ಸಜ್ವಾಲಕವಲೈರ್ಮುಖೈಃ ।**
**ಪ್ರವೇಶಸ್ತೇನ ವೈ ನಿತ್ಯಂ ಸರ್ವೇಷಾಮಪಕಾರಿಣಾಂ ॥ ೧೨೨ ॥**

**ಯೇ ಘಾತಯಂತಿ ವಿಪ್ರಾನ್ಗಾ ಬಾಲಂ ವೃದ್ಧಂ ತಥಾತುರಂ ।**
**ಶರಣಾಗತಂ ವಿಶ್ವಸ್ತಂ ಸ್ತ್ರಿಯಂ ಮಿತ್ರಂ ನಿರಾಯುಧಂ ॥ ೧೨೩ ॥**

---

೧೧೯-೧೨೨. ಆ ಊರಿನಲ್ಲಿ ಮಹಾಘೋರವಾದ ಮತ್ತು ಸಕಲ ಪ್ರಾಣಿಗಳಿಗೂ ಭಯವನ್ನುಂಟುಮಾಡುವ ಬಾಗಿಲೆಂದರೆ ದಕ್ಷಿಣದ್ವಾರವೇ. ಅಲ್ಲಿ ಯಾವಾಗಲೂ ಹಾಹಾಕಾರವೇ ಕೇಳಿಬರುತ್ತಿರುವುದು. ಆ ಬಾಗಿಲಲ್ಲಿ ಬಹು ಕತ್ತಲೆ ಕವಿದಿರುವುದು ಮತ್ತು ಚೂಪಾದ ಮೊನೆನೆಳು ತುಂಬಿಕೊಂಡಿರುವುವು. ಅಲ್ಲದೆ ಬಗೆಬಗೆಯ ಮುಳ್ಳುಗಳು ಅಲ್ಲಿ ಇರುವುವಲ್ಲದೆ ಚೇಳುಗಳೂ, ಹಾವುಗಳೂ, ವಜ್ರಕೀಟಗಳೂ, ತೋಳಗಳೂ, ಹುಲಿಗಳೂ, ಕರಡಿಗಳೂ, ಸಿಂಹಗಳೂ, ನರಿಗಳೂ, ನಾಯಿಗಳೂ, ಬೆಕ್ಕುಗಳೂ, ಹದ್ದುಗಳೂ ಮುತ್ತಿಕೊಂಡು ತಮ್ಮ ತಮ್ಮ ಜ್ವಾಲೆಯನ್ನುಗುಳುತ್ತಿರುವ ಮುಖಗಳಿಂದ, ಆ ದಾರಿಯಲ್ಲಿ ಬರುವವರನ್ನು ತಿಂದುಬಿಡುವುವು. ಆ ಮಾರ್ಗದಲ್ಲಿ ನಾನಾವಿಧವಾದ ಅಪಕಾರಗಳನ್ನು ಮಾಡಿದ ಪಾಪಿಗಳಿಗೇ ಪ್ರವೇಶವು.

೧೨೩. ಯಾರು ಬ್ರಾಹ್ಮಣನನ್ನೂ, ಗೋವನ್ನೂ, ಶಿಶುವನ್ನೂ, ವೃದ್ಧನನ್ನೂ, ರೋಗಿಯನ್ನೂ, ಮರೆಹೊಕ್ಕವನನ್ನೂ, ನಂಬಿದವನನ್ನೂ, ಸ್ತ್ರೀಯನ್ನೂ, ಸ್ನೇಹಿತನನ್ನೂ, ಆಯುಧಹೀನನನ್ನೂ ಕೊಲ್ಲುವರೋ —

ಯೇऽಗಮ್ಯಾಗಾಮಿನೋ ಮೂಢಾಃ ಪರದ್ರವ್ಯಾಪಹಾರಿಣಃ ।
ನಿಕ್ಷೇಪಸ್ಯಾಪಹರ್ತಾರೋ ವಿಷವಹ್ನಿಪ್ರದಾಶ್ಚ ಯೇ ॥ ೧೨೪ ॥

ಪರಭೂಮಿಂ ಗೃಹಂ ಶಯ್ಯಾಂ ವಸ್ತ್ರಾಲಂಕಾರಹಾರಿಣಃ ।
ಪರರಂಧ್ರೇಷು ಯೇ ಕ್ರೂರಾ ಯೇ ಸದಾನೃತವಾದಿನಃ ॥ ೧೨೫ ॥

ಗ್ರಾಮರಾಷ್ಟ್ರಪುರಸ್ಥಾನೇ ಮಹಾದುಃಖಪ್ರದಾ ಹಿ ಯೇ ।
ಕೂಟಸಾಕ್ಷಿಪ್ರದಾತಾರಃ ಕನ್ಯಾವಿಕ್ರಯಕಾರಕಾಃ ॥ ೧೨೬ ॥

ಅಭಕ್ಷ್ಯಭಕ್ಷಣರತಾ ಯೇ ಗಚ್ಛಂತಿ ಸುತಾಂ ಸ್ನುಷಾಂ ।
ಮಾತರಂ ಪಿತರಂ ಚೈವ ಯೇ ವದಂತಿ ಚ ಪೌರುಷಂ ॥ ೧೨೭ ॥

---

೧೨೪. ಯಾರು ಅಗಮ್ಯಾಗಮನ ಮಾಡುವರೋ, ಯಾರು ಪರದ್ರವ್ಯವನ್ನಪಹರಿಸುವರೋ, ಯಾರು ತನ್ನಲ್ಲಿ ಒತ್ತೆಯಿಟ್ಟಿದ್ದ ವಸ್ತುವನ್ನ ಕಸಿದುಕೊಳ್ಳುವರೋ, ಯಾರು ವಿಷವನ್ನು ಕುಡಿಸುವರೋ, ಯಾರು ಕಿಚ್ಚನ್ನು ಹಚ್ಚುವರೋ—

೧೨೫. ಮತ್ತು ಯಾರು ಇನ್ನೊಬ್ಬರ ಭೂಮಿಯನ್ನೂ, ಮನೆಯನ್ನೂ, ಹಾಸಿಗೆಯನ್ನೂ, ವಸ್ತ್ರಗಳನ್ನೂ, ಒಡವೆಗಳನ್ನೂ ಅಪಹರಿಸುವರೋ, ಯಾರು ಹೆರವರ ಆಪತ್ಸಮಯವನ್ನೇ ಕಾದಿದ್ದು ಕ್ರೂರತನದಿಂದ ವರ್ತಿಸುವರೋ, ಯಾರು ಸರ್ವದಾ ಸುಳ್ಳನ್ನೇ ಬೊಂಕುವರೋ—

೧೨೬. ಯಾರು ತಾವಿರುವ ಊರಿಗಾಗಲಿ, ರಾಷ್ಟ್ರಕ್ಕಾಗಲಿ, ಪಟ್ಟಣಕ್ಕಾಗಲಿ ಅತಿಶಯವಾದ ಸಂಕಟವನ್ನು ತಂದೊಡ್ಡುವರೋ, ಯಾರು ಕೂಟಸಾಕ್ಷ್ಯ (ಸುಳ್ಳುಸಾಕ್ಷಿ) ಹೇಳುವರೋ, ಯಾರು ಕನ್ಯಾ ವಿಕ್ರಯ ಮಾಡುವರೋ—

೧೨೭. ಯಾರು ತಿನ್ನಬಾರದ ವಸ್ತುಗಳನ್ನು ತಿನ್ನುವರೋ, ಯಾರು ಮಗಳೊಡನೆ ಅಥವಾ ಸೊಸೆಯೊಡನೆ ಬೆರೆಯುವರೋ, ಯಾರು ತಾಯಿತಂದೆಗಳನ್ನು ತುಚ್ಛವಾಗಿ ನಿಂದಿಸುವರೋ—

**ಅನ್ಯೇ ಯೇ ಚೈವ ನಿರ್ದಿಷ್ಟಾ ಮಹಾಪಾತಕಕಾರಿಣಃ ।**
**ದಕ್ಷಿಣೇನ ತು ತೇ ಸರ್ವೇ ದ್ವಾರೇಣ ಪ್ರವಿಶಂತಿ ವೈ ॥ ೧೨೮ ॥**

**ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ವ್ಯಾಸರ್ಷಿಸಂವಾದೇ ಯಮ-ಲೋಕಸ್ಯ ಮಾರ್ಗಸ್ವರೂಪಾಖ್ಯಾನನಿರೂಪಣಂ ನಾಮ ಚತುರ್ದಶಾಧಿಕದ್ವಿಶತತಮೋऽಧ್ಯಾಯಃ**

---

೧೨೮. ಇನ್ನೂ ಯಾರುಯಾರು ಮಹಾಪಾತಕಿಗಳೆಂದು ಪರಿಗಣಿಸಲ್ಪಟ್ಟಿರುವರೋ—ಅವರೆಲ್ಲರೂ ಈ ದಕ್ಷಿಣದ್ವಾರದಿಂದಲೇ ಯಮಪುರವನ್ನು ಪ್ರವೇಶಿಸುವರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ವ್ಯಾಸರ್ಷಿಸಂವಾದರೂಪವಾದ ಯಮಲೋಕ ಮಾರ್ಗಸ್ವರೂಪಕಥನವೆಂಬ ಇನ್ನೂರಹದಿನಾಲ್ಕನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅ ಥ ಮ ಹಾ ಪು ರಾ ಣೇ ಬ್ರಾ ಹ್ಮೇ

## ಪಂಚದಶಾಧಿಕದ್ವಿಶತತಮೋಽಧ್ಯಾಯಃ

---

॥ ಮುನಯ ಊಚುಃ ॥

**ಕಥಂ ದಕ್ಷಿಣಮಾರ್ಗೇಣ ವಿಶಂತಿ ಪಾಪಿನಃ ಪುರಂ ।**
**ಶ್ರೋತುಮಿಚ್ಛಾಮ ತದ್ಬ್ರೂಹಿ ವಿಸ್ತರೇಣ ತಪೋಧನ ॥ ೧ ॥**

॥ ವ್ಯಾಸ ಉವಾಚ ॥

**ಸುಘೋರಂ ತನ್ಮಹಾಘೋರಂ ದ್ವಾರಂ ವಕ್ಷ್ಯಾಮಿ ಭೀಷಣಂ ।**
**ನಾನಾಶ್ವಾಪದಸಂಕೀರ್ಣಂ ಶಿವಾಶತನಿನಾದಿತಂ ॥ ೨ ॥**

---

## ಇನ್ನೂರಹದಿನೈದನೆಯ ಅಧ್ಯಾಯವು

೧. ಆಗ ಮುನಿಗಳು ವ್ಯಾಸನನ್ನು ಕುರಿತು, “ ಓ ತಪೋಧನ ! ಪಾಪಿಗಳು ದಕ್ಷಿಣಮಾರ್ಗದಿಂದ ಯಮಪುರವನ್ನು ಯಾವರೀತಿ ಪ್ರವೇಶಿಸುವರು ? ನಮಗೆ ಅದನ್ನು ಕೇಳಬೇಕೆಂದು ಆಸೆಯಾಗುವ್ರದು. ಆದ್ದರಿಂದ ತಿಳಿಸು ” ಎಂದು ಕೇಳಲು

೨-೩. ವ್ಯಾಸಮಹರ್ಷಿಯು ಹೇಳತೊಡಗಿದನು :—ಎಲೈ ಮುನಿಗಳಿರಾ ! ಆ ದ್ವಾರವು ಅತಿಘೋರವಾದುದು. ಮಹಾಭಯಂಕರವಾದುದು. ಅಲ್ಲಿ ನಾನಾವಿಧವಾದ ದುಷ್ಟಮೃಗಗಳು ತುಂಬಿರುವುವು. ನೂರಾರು ನರಿಗಳು ಕೂಗಿಕೊಳ್ಳುತ್ತಿರುವುವು. ಅವುಗಳ ಫೇತ್ಕಾರನಾದವು ಭೋರೆನ್ನುತ್ತಿರುವುದು.

ಘೇತ್ಕಾರರವಸಂಯುಕ್ತಮಗಮ್ಯಂ ಲೋಮಹರ್ಷಣಂ ।
ಭೂತಪ್ರೇತಪಿಶಾಚೈಶ್ಚ ವೃತಂ ಚಾನ್ಯೈಶ್ಚ ರಾಕ್ಷಸೈಃ ॥ ೩ ॥

ಏವಂ ದೃಷ್ಟ್ವಾ ಸುದುರಾಂತೇ ದ್ವಾರಂ ದುಷ್ಕೃತಕಾರಿಣಃ ।
ಮೋಹಂ ಗಚ್ಛಂತಿ ಸಹಸಾ ತ್ರಾಸಾದ್ವಿಪ್ರಲಪಂತಿ ಚ ॥ ೪ ॥

ತತಸ್ತಾನ್ ಶೃಂಖಲೈಃ ಪಾಶೈರ್ಬದ್ಧ್ವಾ ಕರ್ಷಂತಿ ನಿರ್ಭಯಾಃ ।
ತಾಡಯಂತಿ ಚ ದಂಡೈಶ್ಚ ಭರ್ತ್ಸಯಂತಿ ಪುನಃ ಪುನಃ ॥ ೫ ॥

ಲಬ್ಧಸಂಜ್ಞಾಸ್ತತಸ್ತೇ ವೈ ರುಧಿರೇಣ ಪರಿಪ್ಲುತಾಃ ।
ವ್ರಜಂತಿ ದಕ್ಷಿಣಂ ದ್ವಾರಂ ಪ್ರಸ್ಖಲಂತಃ ಪದೇ ಪದೇ ॥ ೬ ॥

ತೀವ್ರಕಂಟಕಯುಕ್ತೇನ ಶರ್ಕರಾನಿಚಿತೇನ ಚ ।
ಕ್ಷುರಧಾರಾನಿಭೈಸ್ತೀಕ್ಷ್ಣೈಃ ಪಾಷಾಣೈರ್ನಿಚಿತೇನ ಚ ॥ ೭ ॥

---

ಅಲ್ಲದೆ ಭೂತಪ್ರೇತ ಪಿಶಾಚಗಳೂ, ರಾಕ್ಷಸರೂ ಅಲ್ಲಿ ಮುತ್ತಿಕೊಂಡಿರುವರು. ಅದನ್ನು ಕಂಡರೆ ಎಂಥವರಿಗಾದರೂ ಮೈಜುಮ್ಮೆನ್ನುವುದು.

೪. ಇಂತಹ ಬಾಗಿಲನ್ನು ಆ ಪಾಪಿಗಳು ದೂರದಿಂದ ನೋಡುತ್ತಲೇ ಹೆದರಿಕೆಯಿಂದ ಥಟ್ಟನೆ ಮೂರ್ಛೆಹೋಗುವರು. ಗಟ್ಟಿಯಾಗಿ ಗೋಳಾಡುವರು.

೫. ಆಗ ಅವರನ್ನು ಯಮದೂತರು ನಿರ್ಭಯರಾಗಿ ಸರಪಣಿಗಳಿಂದಲೂ, ಹಗ್ಗಗಳಿಂದಲೂ ಬಿಗಿದು ಕಟ್ಟಿ ನೆಲದಮೇಲೆ ಎಳೆದುಕೊಂಡು ಹೋಗುವರು. ತಮ್ಮ ಕೈಲಿರುವ ದೊಣ್ಣೆಗಳಿಂದ ಬಡಿಯುವರು. ಮೇಲೆ ಮೇಲೆ ಬಯ್ಯುವರು.

೬. ಅನಂತರ ಆ ಪಾಪಿಗಳು, ಮೂರ್ಛೆಯಿಂದೆಚ್ಚೆತ್ತು, ಮೈ ಕೈಯೆಲ್ಲಾ ರಕ್ತ ಕಿತ್ತುಕೊಂಡು ಹೆಜ್ಜೆಹೆಜ್ಜೆಗೂ ಮುಗ್ಗರಿಸುತ್ತಾ ದಕ್ಷಿಣದ ಬಾಗಿಲ ಬಳಿಗೆ ಬರುವರು.

೭-೯. ಆ ದಕ್ಷಿಣದ್ವಾರದ ಬಳಿಗೆ ಬರುವ ದಾರಿಯು, ಅತಿಚೂಪಾದ ಮೊನೆಯುಳ್ಳ ಮುಳ್ಳುಗಳಿಂದಲೂ, ನೊರಜುಗಲ್ಲುಗಳಿಂದಲೂ, ಕ್ಷೌರದಕತ್ತಿಯ

ಕ್ವಚಿತ್ಪಂಕೇನ ನಿಚಿತಾ ನಿರುತ್ತಾರೈಶ್ಚ ಖಾತಕೈಃ ।
ಲೋಹಸೂಚೀನಿಭೈರ್ದಂತ್ಯೈಃ ಸಂಛನ್ನೇನ ಕ್ವಚಿತ್ಕ್ವಚಿತ್ ॥ ೮ ॥

ತಟಿಪ್ರಸಾತವಿಷಮೈಃ ಪರ್ವತೈರ್ವೃಕ್ಷಸಂಕುಲೈಃ ।
ಪ್ರತಪ್ತಾಂಗಾರಯುಕ್ತೇನ ಯಾಂತಿ ಮಾರ್ಗೇಣ ದುಃಖಿತಾಃ ॥ ೯ ॥

ಕ್ವಚಿದ್ವಿಷಮಗರ್ತಾಭಿಃ ಕ್ವಚಿಲ್ಲೋಷ್ಟೈಃ ಸುಪಿಚ್ಛಲೈಃ ।
ಸುತಪ್ತವಾಲುಕಾಭಿಶ್ಚ ತಥಾ ತೀಕ್ಷ್ಣೈಶ್ಚ ಶಂಕುಭಿಃ ॥ ೧೦ ॥

ಅಯಃಶೃಂಗಾಟಕೈಸ್ತಪ್ತೈಃ ಕ್ವಚಿದ್ದಾವಾಗ್ನಿನಾ ಯುತಂ ।
ಕ್ವಚಿತ್ತಪ್ತಶಿಲಾಭಿಶ್ಚ ಕ್ವಚಿದ್ವ್ಯಾಪ್ತಂ ಹಿಮೇನ ಚ ॥ ೧೧ ॥

---

ಅಲುಗಿನಂತೆ ಚೂಪಾಗಿರುವ ಕಲ್ಲುಗಳಿಂದಲೂ, ತುಂಬಿರುವುದು. ಮತ್ತು ಆ ದಾರಿಯಲ್ಲಿ ಒಂದುಕಡೆ ಕೆಸರು ತುಂಬಿಕೊಂಡಿರುವುದು. ಇನ್ನೊಂದುಕಡೆ ದಾಟುವುದಕ್ಕೇ ಆಗದಂತಹ ಭಾರಿ ಭಾರಿ ಡೊಗರುಗಳು ಬಿದ್ದುಹೋಗಿರುವುವು. ಒಂದೊಂದುಕಡೆ ಕಬ್ಬಿಣದ ಸೂಜಿಗಳಂತೆ ಮೊನಚಾದ ಕಲ್ಲುಗಳು ಹರಡಿಕೊಂಡಿರುವುವು. ಒಂದುಕಡೆ ಎತ್ತರವಾದ ದಿಟ್ಟೆ, ಒಂದುಕಡೆ ಆಳವಾದ ಕಮರಿ, ಇನ್ನೊಂದುಕಡೆ ಕಗ್ಗಾಡು, ಇಷ್ಟೇ ಅಲ್ಲದೆ ಸುಡುತ್ತಿರುವ ಕೆಂಡಗಳು ಬೇರೆ, ಹೀಗಾಗಿ ಅತಿದುರ್ಗಮವಾದ ಆ ಮಾರ್ಗವನ್ನು ದುಃಖದಿಂದ ದಾಟುವರು.

೧೦-೧೧. ಮತ್ತು ಆ ಮಾರ್ಗದಲ್ಲಿ ಒಂದುಕಡೆ, ಆಳವಾದ ಹಳ್ಳ ಕೊಳ್ಳಗಳು. ಒಂದುಕಡೆ, ಕಾಲಿಟ್ಟರೆ ಹಿಡಿದುಕೊಳ್ಳುವ ಜಿಗಟಾದ (ಜೇಡಿ ಮಣ್ಣಿನ) ಹೆಂಟೆಗಳು. ಒಂದುಕಡೆ, ಕಾದ ಮರಳು. ಒಂದುಕಡೆ, ಮೊನಚಾದ ಮೊಳೆಗಳು. ಮಧ್ಯೆ ಮಧ್ಯೆ ಸಿಗುವ ಚತುಷ್ಪಥ (ನಾಲ್ಕುದಾರಿ ಸೇರುವ ಚೌಕ) ಗಳು ಕಬ್ಬಿಣದಿಂದ ಮಾಡಲ್ಪಟ್ಟು ಕಾದುಹೋಗುತ್ತಿರುವವು. ಇನ್ನೊಂದು ಕಡೆ ಕಾಡ್ಗಿಚ್ಚು ಹತ್ತಿಕೊಂಡು ಉರಿಯುತ್ತಿರುವುದು. ಒಂದುಕಡೆ ಸುಡುತ್ತಿರುವ ಕಲ್ಲುಗಳು. ಒಂದುಕಡೆ ಕೊರೆಯುವ ಚಳಿ.

ಕ್ವಚಿದ್ವಾಲುಕಯಾ ವ್ಯಾಪ್ತನಾಕಂಠಾಂತಃಪ್ರವೇಶಯಾ ।
ಕ್ವಚಿದ್ದುಷ್ಟಾಂಬುನಾ ವ್ಯಾಪ್ತಂ ಕ್ವಚಿತ್ಕರ್ಷಾಗ್ನಿನಾ ಪುನಃ ॥ ೧೨ ॥

ಕ್ವಚಿತ್ಸಿಂಹೈರ್ವೃಕೈರ್ವ್ಯಾಘ್ರೈರ್ದಂಶಕೀಟೈಶ್ಚ ದಾರುಣೈಃ ।
ಕ್ವಚಿನ್ಮಹಾಜಲೌಕಾಭಿಃ ಕ್ವಚಿದಜಗರೈಃ ಪುನಃ ॥ ೧೩ ॥

ಮಕ್ಷಿಕಾಭಿಶ್ಚ ರೌದ್ರಾಭಿಃ ಕ್ವಚಿತ್ಸರ್ಪವಿಷೋಲ್ಬಣೈಃ ।
ಕ್ವಚಿದ್ದುಷ್ಟಗಜೈಶ್ಚೈವ ಬಲೋನ್ಮತ್ತೈಃ ಪ್ರಮಾಥಿಭಿಃ ॥ ೧೪ ॥

ಪಂಥಾನಮುಲ್ಲಿಖದ್ಭಿಶ್ಚ ತೀಕ್ಷ್ಣಶೃಂಗೈರ್ಮಹಾವೃಷೈಃ ।
ಮಹಾಶೃಂಗೈಶ್ಚ ಮಹಿಷೈರುಷ್ಟ್ರೈರ್ಮತ್ತೈಶ್ಚ ಖಾದನೈಃ ॥ ೧೫ ॥

ಡಾಕಿನೀಭಿಶ್ಚ ರೌದ್ರಾಭಿರ್ವಿಕರಾಲೈಶ್ಚ ರಾಕ್ಷಸೈಃ ।
ವ್ಯಾಧಿಭಿಶ್ಚ ಮಹಾರೌದ್ರೈಃ ಪೀಡ್ಯಮಾನಾ ವ್ರಜಂತಿ ತೇ ॥ ೧೬ ॥

---

೧೨-೧೩. ಒಂದೊಂದುಕಡೆ ಕುತ್ತಿಗೆಯವರೆಗೂ ಹೂತುಹೋಗುವಹಾಗೆ ಉಸುಬುಗಳು. ಕೆಲವುಕಡೆ ಕೊಳೆತು ನಾರುತ್ತಿರುವ ನೀರು. ಕೆಲವುಕಡೆ ಬೆರಣಿಯ ಬೆಂಕಿ. ಕೆಲವುಕಡೆ ಭಯಂಕರವಾದ ಸಿಂಹ, ತೋಳ, ಹುಲಿ, ಕಾಡುನೊಣಗಳು. ಕೆಲವೆಡೆ ಭಾರಿ ಭಾರಿ ಜಿಗಣೆಗಳು. ಕೆಲವೆಡೆ ದೊಡ್ಡ ದೊಡ್ಡ ಹೆಬ್ಬಾವುಗಳು.

೧೪-೧೫. ಕೆಲವುಕಡೆಯಂತೂ ಭೀಕರವಾದ ಮಕ್ಷಿಕಗಳು. (ಸೊಳ್ಳೆ-ನೊಣ) ಕೆಲವುಕಡೆ ತೀವ್ರವಾದ ವಿಷಗಳುಳ್ಳ ಸರ್ಪಗಳು. ಇನ್ನು ಕೆಲವುಕಡೆ ಬಲದಿಂದ ಕೊಬ್ಬಿ ಉಜ್ಜಿಕೊಂಡುಹೋಗುವ ಕೆಟ್ಟ ಸಲಗಗಳು. ಮತ್ತೆ ಕೆಲವುಕಡೆ ಚೂಪಾದ ಕೋಡುಗಳಿಂದ ದಾರಿಯನ್ನೇ ಕೆತ್ತುತ್ತಿರುವ ಎತ್ತುಗಳು. ಬೇರೆ ಕೆಲವುಕಡೆ ಭಾರಿ ಭಾರಿ ಕೊಂಬುಗಳುಳ್ಳ ಕೋಣಗಳು. ಕೆಲವೆಡೆ ತಿನ್ನುವುದಕ್ಕೆ ಬರುವ ಮದಿಸಿದ ಒಂಟೆಗಳು.

೧೬. ಕೆಲವುಕಡೆ ಮಹಾಕರ್ಕಶರಾದ ಡಾಕಿನಿಯರೂ, ವಿಕಾರರೂಪದ ರಾಕ್ಷಸರೂ, ಅತಿಭಯಂಕರವಾದ ರೋಗಗಳೂ ಇರುವವು. ಹೀಗಾಗಿ ಈ ದಕ್ಷಿಣಮಾರ್ಗದಲ್ಲಿ ಹೋಗುವ ಜೀವರು ಬಹುಪೀಡೆಗೊಳಗಾಗುವರು.

ಮಹಾಧೂಲಿವಿಮಿಶ್ರೇಣ ಮಹಾಚಂಡೇನ ವಾಯುನಾ ।
ಮಹಾಪಾಷಾಣವರ್ಷೇಣ ಹನ್ಯಮಾನಾ ನಿರಾಶ್ರಯಾಃ ॥ ೧೭ ॥

ಕ್ವಚಿದ್ವಿದ್ಯುನ್ನಿಪಾತೇನ ದೀರ್ಯಮಾಣಾ ವ್ರಜಂತಿ ತೇ ।
ಮಹತಾ ಬಾಣವರ್ಷೇಣ ಬಿದ್ಯಮಾನಾಶ್ಚ ಸರ್ವಶಃ ॥ ೧೮ ॥

ಪತದ್ಭಿರ್ವಜ್ರನಿರ್ಘಾತೈರೊಲ್ಕಾಪಾತೈಃ ಸುದಾರುಣೈಃ ।
ಪ್ರದೀಪ್ತಾಂಗಾರವರ್ಷೇಣ ದಹ್ಯಮಾನಾ ವಿಶಂತಿ ಚ ॥ ೧೯ ॥

ಮಹತಾ ಪಾಂಶುವರ್ಷೇಣ ಪೂರ್ಯಮಾಣಾ ರುದಂತಿ ಚ ।
ಮೇಘಾರವೈಃ ಸುಘೋರೈಶ್ಚ ವಿತ್ರಾಸ್ಯಂತೇ ಮುಹುರ್ಮುಹುಃ ॥ ೨೦ ॥

---

೧೭-೧೮. ಆ ದಾರಿಯಲ್ಲಿ ನಿಲ್ಲಲು ಒಂದು ನೆಲೆಯೂ ಇರುವುದಿಲ್ಲ. ಅಲ್ಲಿ ಹೋಗುತ್ತಿರುವಾಗ ಒಂದೊಂದುಸಲ ಭಾರಿಧೂಳಿನ ಸುಂಟರಗಾಳಿಯು ಜೋರಾಗಿ ಬೀಸುವುದು. ಒಂದೊಂದುಸಲ ಮೇಲಿನಿಂದ ಭಾರಿ ಭಾರಿ ಕಲ್ಲುಗಳ ಮಳೆಯಾಗುವುದು. ಒಂದೊಂದುಕಡೆ ಮೈಮೇಲೆ ಫಳಾರನೆ ಸಿಡಿಲು ಬಡಿಯುವುದು. ಆ ಏಟಿಗೆ ಮೈಯೇ ಸೀಳಿಹೋಗುವುದು. ಮತ್ತು ಸುತ್ತಲೂ ಬಾಣಗಳು ಮಳೆ ಸುರಿದಂತೆ ಮೇಲೆ ಬಿದ್ದು ಮೈಯೆಲ್ಲಾ ಕಿತ್ತುಹೋಗುವುದು.

೧೯. ಅಲ್ಲದೆ ಆ ಜೀವರು ಹೋಗುವಾಗ ತಲೆಯಮೇಲೆ ದಾರುಣವಾದ ಸಿಡಿಲುಗಳೂ, ಉಲ್ಕಾ (ಕೊಳ್ಳಿ) ಪಾತಗಳೂ, ಸುಡುತ್ತಿರುವ ಕೆಂಡಗಳೂ ಬಿದ್ದು ಮೈಯ್ಯೆಲ್ಲಾ ಸುಟ್ಟುಹೋಗುವುದು.

೨೦. ಒಂದೊಂದುಕಡೆ ಹೋಗುವಾಗ ಮೇಲಿನಿಂದ ಧೂಳಿನಮಳೆಯಾಗಿ ಹೂತುಹೋಗುವರು. ಆಗವರು ಗಟ್ಟಿಯಾಗಿ ಅಳುವರು. ಅಲ್ಲದೆ ಮೇಘಗಳು ದಾರುಣವಾಗಿ ಗುಡುಗುವುವು. ಆ ಸದ್ದಿಗೆ ಗಳಿಗೆಗಳಿಗೆಗೂ (ಮತ್ತೆಮತ್ತೆ) ನಡುಗುವರು.

ನಿಃಶೇಷಾಃ ಶರವರ್ಷೇಣ ಚೂರ್ಣ್ಯಮಾನಾಶ್ಚ ಸರ್ವತಃ ।
ಮಹಾಕ್ಷಾರಾಂಬುಧಾರಾಭಿಃ ಸಿಚ್ಯಮಾನಾ ವ್ರಜಂತಿ ಚ ॥ ೨೧ ॥

ಮಹಾಶೀತೇನ ಮರುತಾ ರೂಕ್ಷೇಣ ಪರುಷೇಣ ಚ
ಸಮಂತಾದ್ದೀರ್ಯಮಾಣಾಶ್ಚ ಶುಷ್ಯಂತೇ ಸಂಕುಚಂತಿ ಚ ॥ ೨೨ ॥

ಇತ್ಥಂ ಮಾರ್ಗೇಣ ಪುರುಷಾಃ ಪಾಥೇಯರಹಿತೇನ ಚ ।
ನಿರಾಲಂಬೇನ ದುರ್ಗೇಣ ನಿರ್ಜಲೇನ ಸಮಂತತಃ ೨೩ ॥

ಅತಿಶ್ರಮೇಣ ಮಹತಾ ನಿರ್ಗತೇನಾಶ್ರಮಾಯು ವೈ ।
ನೀಯಂತೇ ದೇಹಿನಃ ಸರ್ವೇ ಯೇ ಮೂಢಾಃ ಪಾಪಕರ್ಮಿಣಃ ॥ ೨೪ ॥

---

೨೧. ಮತ್ತು ಅವರು ಹೋಗುತ್ತಿರುವಾಗ ನಾನಾ ಕಡೆಗಳಿಂದ ಬಾಣಗಳ ಮಳೆ ಬಿದ್ದು ಮೈಯೆಲ್ಲಾ ಪುಡಿಪುಡಿಯಾಗುವುದು. ಅಲ್ಲದೆ ಅತಿ ಉಪ್ಪಾದ ನೀರಿನ ಧಾರೆಗಳು ತಲೆಯಮೇಲೆ ಬಿದ್ದು ಮೈಯೆಲ್ಲಾ ತೊಯ್ದುಹೋಗುವುದು.

೨೨. ಒಂದೊಂದುಸಲ ಗಾಳಿಯು ಬಹುವಾಗಿ ಕೊರೆಯುತ್ತಾ ಬೀಸುವುದು. ಒಂದೊಂದುಸಲ ಬಿಸಿಯಾಗಿ ಬೀಸುವುದು. ಒಂದೊಂದುಸಲ ಜೋರಾಗಿಬೀಸುವುದು. ಹೀಗಾಗಿ ಆ ದಾರಿಯಲ್ಲಿ ಪ್ರಯಾಣಮಾಡುವ ಜೀವರು ಒಮ್ಮೆ ಮೈಯ್ಯೆಲ್ಲಾ ಬಿರಿಯುವರು. ಇನ್ನೊಮ್ಮೆ ಕಂದಿಹೋಗುವರು. ಮತ್ತೊಮ್ಮೆ ಸೆಡೆದುಕೊಳ್ಳುವರು.

೨೩. ಆ ಮಾರ್ಗದಲ್ಲಿ ತಿನ್ನಲು ಬುತ್ತಿಗಿತ್ತಿಗಳಿಲ್ಲ ಕುಡಿಯಲು ನೀರು ಸಹ ಸಿಗದು, ನಡೆಯುವುದಕ್ಕೆ ಆಸರೆಯಾಗಿ ಯಾವ ಅವಲಂಬನವೂ ಇಲ್ಲ.

೨೪. ಇದರ ಮೂಲಕವಾಗಿಯೇ ಪಾಪಕೃತ್ಯಗಳನ್ನು ಮಾಡಿದ ಮೂಢರಾದ ಜನನು ಬಹು ಪ್ರಯಾಸದಿಂದ ನಡೆಯುತ್ತಾ ಹೋಗಬೇಕು.

ಯಮದೂತ್ಯೈರ್ಮಹಾಘೋರೈಸ್ತದಾಜ್ಞಾಕಾರಿಭಿರ್ಬಲಾತ್ ।
ಏಕಾಕಿನಃ ಪರಾಧೀನಾ ಮಿತ್ರಬಂಧುವಿವರ್ಜಿತಾಃ ॥ ೨೫ ॥

ಶೋಚಂತಃ ಸ್ವಾನಿ ಕರ್ಮಾಣಿ ರುದಂತಿ ಚ ಮುಹುರ್ಮುಹುಃ ।
ಪ್ರೇತೀಭೂತಾ ನಿಷಿದ್ಧಾಸ್ತೇ ಶುಷ್ಕಕಂಠೌಷ್ಠತಾಲುಕಾಃ ॥ ೨೬ ॥

ಕೃಶಾಂಗಾ ಭೀತಭೀತಾಶ್ಚ ದಹ್ಯಮಾನಾಃ ಕ್ಷುಧಾಗ್ನಿನಾ ।
ಬದ್ಧಾಃ ಶೃಂಖಲಯಾ ಕೇಚಿತ್ಕೇಚಿದುತ್ತಾನಪಾದಯೋಃ ॥ ೨೭ ॥

ಆಕೃಷ್ಯಂತೇ ಶುಷ್ಯಮಾಣಾ ಯಮದೂತೈರ್ಬಲೋತ್ಕಟೈಃ ।
ನರಾ ಅಧೋಮುಖಾಶ್ಚಾನ್ಯೇ ಕೃಷ್ಯಮಾಣಾಃ ಸುದುಃಖಿತಾಃ ॥ ೨೮ ॥

---

೨೫. ಯಮಧರ್ಮನ ಅಪ್ಪಣೆಯಂತೆ ಭಯಂಕರರಾದ ಆ ದೂತರು ತಮ್ಮ ಸ್ನೇಹಿತರನ್ನೂ ಬಂಧುಗಳನ್ನೂ ತೊರೆದು ಏಕಾಕಿಗಳಾಗಿರುವ ಪರಾಧೀನರಾದ ಆ ಜೀವರನ್ನು ಬಲವಂತವಾಗಿ ಎಳೆದು ಒಯ್ಯುವರು.

೨೬. ಆ ಜೀವರು ಪ್ರೇತಾವಸ್ಥೆಯಲ್ಲಿರುವುದರಿಂದ ಸ್ವತಂತ್ರವಾಗಿ ನೀರು ಮೊದಲಾದುವನ್ನು ಮುಟ್ಟಲು ನಿಷೇಧಿಸಲ್ಪಟ್ಟವರಾಗಿ ಗಂಟಲು, ತುಟಿ, ದವಡೆಗಳು ಒಣಗಿಹೋಗುತ್ತಿರಲು, ತಾವು ಮಾಡಿದ ಕರ್ಮಗಳನ್ನು ನೆನೆನೆನೆದು, ಪಶ್ಚಾತ್ತಾಪಪಡುತ್ತಾ ಬಾರಿಬಾರಿಗೂ ಗೋಳಾಡುವರು.

೨೭–೨೮. ಆಗವರ ಕೈಕಾಲು ಮೊದಲಾದ ಅಂಗಗಳು ಕೃಶವಾಗಿಬಿಟ್ಟಿರುವುವು. ಮೇಲೆ ಹಸಿವಿನ ಬೇಗೆ ಬೇರೆ. ಜೊತೆಗೆ ಮುಂದೇನಾಗುವುದೋ ಎಂಬುದಾಗಿ ಹೆಜ್ಜೆಹೆಜ್ಜೆಗೂ ಹೆದರಿಕೆ. ಇಂತಹ ಜನರಲ್ಲಿ ಕೆಲವರನ್ನು ಶೃಂಖಲೆ ಇಂದ (ಸಂಕೋಲೆ) ಬಿಗಿಯುವರು. ಕೆಲವರಿಗೆ ಎರಡು ಕಾಲಿಗೂ ಬೇಡಿ ಎಳೆಯುವರು. ಕೆಲವರನ್ನು ಕೆಳಮುಖವಾಗಿ ಎಳೆದುಕೊಂಡು ಹೋಗುವರು. ಆಗ ಜೀವರು ಬಹುವಾಗಿ ದುಃಖಿಸುವರು.

ಅನ್ನಪಾನೀಯರಹಿತಾ ಯಾಚಮಾನಾಃ ಪುನಃ ಪುನಃ ।
ದೇಹಿ ದೇಹೀತಿ ಭಾಷಂತಃ ಸಾಶ್ರುಗದ್ಗದಯಾ ಗಿರಾ ॥ ೨೯ ॥

ಕೃತಾಂಜಲಿಪುಟಾ ದೀನಾಃ ಕ್ಷುತ್ತೃಷ್ಣಾಪರಿಪೀಡಿತಾಃ ।
ಭಕ್ಷ್ಯಾನುಚ್ಚಾವಚಾನ್ದೃಷ್ಟ್ವಾ ಭೋಜ್ಯಾನ್ಪೇಯಾಂಶ್ಚ ಪುಷ್ಕಲಾನ್ ॥೩೦॥

ಸುಗಂಧದ್ರವ್ಯಸಂಯುಕ್ತಾನ್ಯಾಚಮಾನಾಃ ಪುನಃ ಪುನಃ ।
ದಧಿಕ್ಷೀರಘೃತೋನ್ಮಿಶ್ರಂ ದೃಷ್ಟ್ವಾ ಶಾಲ್ಯೋದನಂ ತಥಾ ॥ ೩೧ ॥

ಪಾನಾನಿ ಚ ಸುಗಂಧೀನಿ ಶೀತಲಾನ್ಯುದಕಾನಿ ಚ ।
ತಾನ್ಯಾಚಮಾನಾಂಸ್ತೇ ಯಾಮ್ಯಾ ಭರ್ತ್ಸಯಂತಸ್ತದಾಬ್ರುವನ್ ।
ವಚೋಭಿಃ ಪರುಷೈರ್ಭೀಮಾ ಕ್ರೋಧರಕ್ತಾಂತಲೋಚನಾಃ ॥ ೩೨ ॥

---

೨೯. ಮತ್ತು ಆ ಜೀವರು ತಿನ್ನಲು ಅನ್ನವೂ ಕುಡಿಯಲು ನೀರೂ ಇಲ್ಲದೆ ಇರುವುದರಿಂದ, ಕಣ್ಣೀರು ಸುರಿಸುತ್ತಾ ಗದ್ಗದ ಕಂಠದಿಂದ ಪುನಃಪುನಃ 'ದೇಹಿ ದೇಹಿ' ಎಂದು (ಅನ್ನನೀರುಗಳನ್ನು) ಯಾಚಿಸುವರು.

೩೦-೩೨. ಜೀವರು ಹಸಿವು ಬಾಯಾರಿಕೆಗಳಿಂದ ಪೀಡಿಸಲ್ಪಟ್ಟವರಾಗಿ ಅಲ್ಲಿ ರಾಶಿರಾಶಿಯಾಗಿ ಬಿದ್ದಿರುವಂತಹ, ಕಮ್ಮಗೆ ವಾಸನೆಯನ್ನು ಬೀರುವ ಭಕ್ಷ್ಯಗಳನ್ನೂ, ಭೋಜ್ಯಗಳನ್ನೂ, ಪುಷ್ಕಲವಾದ ಪಾನೀಯಗಳನ್ನೂ, ಹಾಲು ತುಪ್ಪ, ಮೊಸರುಗಳನ್ನು ಹಾಕಿ ಕಲಸಿಟ್ಟಿರುವ ಸಣ್ಣಕ್ಕಿಯ ಅನ್ನಗಳನ್ನೂ, ಘಮಘಮವಾಸನೆಯನ್ನು ಬೀರುತ್ತಿರುವ ಪಾನಕಗಳನ್ನೂ, ತಂಪಾದ ತಿಳಿನೀರುಗಳನ್ನೂ ಕಂಡು ಕೊಡಿಕೊಡಿ ಎಂದು ಪುನಃಪುನಃ ಬೇಡುವರು. ಈರೀತಿ ಯಾಚಿಸುವ ಪಾಪಿಗಳನ್ನು ಕೋಪದಿಂದ ಕೆಂಡದಂತೆ ಕಣ್ಣುಮಾಡಿ ಭಯಂಕರಾಕಾರದ ಯಮದೂತರು ಪರುಷವಾಕ್ಯಗಳಿಂದ ಜರೆಯುತ್ತಾ ಗದರಿಸುತ್ತಾ ಹೀಗೆನ್ನುವರು.

॥ ಯಾಮ್ಯಾ ಊಚುಃ ॥

ನ ಭವದ್ಭಿರ್ಹುತಂ ಕಾಲೇ ನ ದತ್ತಂ ಬ್ರಾಹ್ಮಣೇಷು ಚ ।
ಪ್ರಸಭಂ ದೀಯಮಾನಂ ಚ ವಾರಿತಂ ಚ ದ್ವಿಜಾತಿಷು ॥ ೩೩ ॥

ತಸ್ಯ ಪಾಪಸ್ಯ ಚ ಫಲಂ ಭವತಾಂ ಸಮುಪಾಗತಂ ।
ನಾಗ್ನೌ ದಗ್ಧಂ ಜಲೇ ನಷ್ಟಂ ನ ಹೃತಂ ನೃಪತಸ್ಕರೈಃ ॥ ೩೪ ॥

ಕುತೋ ವಾ ಸಾಂಪ್ರತಂ ವಿಪ್ರೇ ಯನ್ನ ದತ್ತಂ ಪುರಾಧಮಾಃ ।
ಯೈರ್ದತ್ತಾನಿ ತು ದಾನಾನಿ ಸಾಧುಭಿಃ ಸಾತ್ತ್ವಿಕಾನಿ ತು ॥ ೩೫ ॥

ತೇಷಾಮೇತೇ ಪ್ರದೃಶ್ಯಂತೇ ಕಲ್ಪಿತಾ ಹ್ಯನ್ನಪರ್ವತಾಃ ।
ಭಕ್ಷ್ಯಭೋಜ್ಯಾಶ್ಚ ಪೇಯಾಶ್ಚ ಲೇಹ್ಯಾಶ್ಚೋಷ್ಯಾಶ್ಚ ಸಂವೃತಾಃ ॥ ೩೬ ॥

---

೩೩. ಎಲೈ ಪಾಪಿಗಳಿರಾ! ನೀವು ಕಾಲಕಾಲಕ್ಕೆ ಸರಿಯಾಗಿ ಯಜ್ಞೇಶ್ವರನಿಗೆ ಆಹುತಿಯನ್ನು ಕೊಡಲಿಲ್ಲ. ಬ್ರಾಹ್ಮಣರಿಗೆ ಅನ್ನದಾನಮಾಡಲಿಲ್ಲ. ಹಾಗೆ ಯಾರಾದರೂ ಮಾಡುತ್ತಿದ್ದರೆ ಅಂಥವರನ್ನೂ ಬಲಾತ್ಕಾರದಿಂದ ತಡೆಗಟ್ಟಿದಿರಿ.

೩೪. ಆ ಪಾಪದ ಫಲವು ನಿಮಗೆ ಈಗ ಒದಗಿರುವುದು. ಎಲೈ ಅಮರಿರಾ! ನಿಮ್ಮ ಸ್ವತ್ತು ಬೆಂಕಿಗೆ ಬಿದ್ದು ಸುಟ್ಟುಹೋಗಿತ್ತೇ? ನೀರಿನಲ್ಲಿ ಮುಳುಗಿತ್ತೇ? ಕಳ್ಳರಿಂದಾಗಲಿ, ಅರಸರಿಂದಲಾಗಲಿ ಕಸಿದುಕೊಳ್ಳಲ್ಪಟ್ಟಿತ್ತೇ? ಅಥವಾ ಬ್ರಾಹ್ಮಣರಿಗೆ ಕೈಯೆತ್ತಿಕೊಡಲ್ಪಟ್ಟಿತ್ತೇ? ಈಗಮಾತ್ರ ಏಕೆ ಒದ್ದಾಡುವಿರಿ? 'ಅಗ್ನೌದಗ್ಧಂ ಜಲೇ ಮಗ್ನಂ ಚೋರೈರಪಹೃತಂ ಧನಂ, ತತ್ಸರ್ವಂ ಪರಲೋಕಾಯ' ಎಂಬ ಆರ್ಯೋಕ್ತಿಯನ್ನು ಗಮನಿಸಬಹುದು.

೩೫-೩೬. ಯಾವ ಸತ್ಪುರುಷರು ಸಾತ್ವಿಕಬುದ್ಧಿಯಿಂದ ದಾನಗಳನ್ನು ಮಾಡಿರುವರೋ ಅಂತಹ ಪುಣ್ಯಾತ್ಮರ ಸಲುವಾಗಿಯೇ, ಈ ಪರ್ವತಾಕಾರದ ಅನ್ನರಾಶಿಗಳೂ, ಭಕ್ಷ್ಯಭೋಜ್ಯರಾಶಿಗಳೂ, ಅಪಾರವಾದ ಪಾನೀಯಗಳೂ, ಲೇಹ್ಯಗಳೂ, ಚೋಷ್ಯಗಳೂ ಮೀಸಲಾಗಿರುವುವು.

ನ ಯೂಯಮಭಿಲಪ್ಸ್ಯಧ್ವೇ ನ ದತ್ತಂ ಚ ಕಥಂಚನ ।
ಯೈಸ್ತು ದತ್ತಂ ಹುತಂ ಚೇಷ್ಟಂ ಬ್ರಾಹ್ಮಣಾಶ್ಚೈವ ಪೂಜಿತಾಃ ॥ ೩೭ ॥

ತೇಷಾಮನ್ನಂ ಸಮಾನೀಯ ಇಹ ನಿಕ್ಷಿಪ್ಯತೇ ಸದಾ ।
ಪರಸ್ವಂ ಕಥಮಸ್ಮಾಭಿರ್ದಾತುಂ ಶಕ್ಯೇತ ನಾರಕಾಃ ॥ ೩೮ ॥

॥ ವ್ಯಾಸ ಉವಾಚ ॥

ಕಿಂಕರಾಣಾಂ ವಚಃ ಶ್ರುತ್ವಾ ನಿಃಸ್ಪೃಹಾಃ ಕ್ಷುತ್ತೃಷಾರ್ದಿತಾಃ ।
ತತಸ್ತೇ ದಾರುಣೈಶ್ಶಸ್ತ್ರೈಃ ಪೀಡ್ಯಂತೇ ಯಮಕಿಂಕರೈಃ ॥ ೩೯ ॥

ಮುದ್ಗರೈರ್ಲೋಹದಂಡೈಶ್ಚ ಶಕ್ತಿತೋಮರಪಟ್ಟಿಶೈಃ ।
ಪರಿಘೈರ್ಭಿಂದಿಪಾಲೈಶ್ಚ ಗದಾಪರಶುಭಿಃ ಶರೈಃ ॥ ೪೦ ॥

ಪೃಷ್ಠತೋ ಹನ್ಯಮಾನಾಶ್ಚ ಯಮದೂತೈಃ ಸುನಿರ್ದಯೈಃ ।
ಅಗ್ರತಃ ಸಿಂಹವ್ಯಾಘ್ರಾದ್ಯೈರ್ಭಕ್ಷ್ಯಂತೇ ಪಾಪಕಾರಿಣಃ ॥ ೪೧ ॥

---

೩೭-೩೮. ನಿಮಗೆ ಇದನ್ನು ಕೊಡುವುದಿಲ್ಲ. ನೀವು ಯಾರಿಗೂ ಏನನ್ನೂ ಕೊಟ್ಟವರಲ್ಲ. ಯಾರು ದಾನಶೀಲರೋ, ಯಾರು ಹೋಮನಿರತರೋ ಮತ್ತು ಯಾರು ಯಾಗಶೀಲರೋ, ಯಾರು ಬ್ರಾಹ್ಮಣರನ್ನು ಪೂಜಿಸಿರುವರೋ ಅಂಥವರಿಗೋಸ್ಕರವಾಗಿಯೇ ಇಲ್ಲಿ ಅನ್ನಪಾನಾದಿಗಳನ್ನು ತಂದು ಇಟ್ಟಿರುವರು. ಎಲೈ ಪಾಪಿಗಳಿರಾ! ಇನ್ನೊಬ್ಬರ ಸೊತ್ತನ್ನು ನಾವು ಹೇಗೆತಾನೇ ಕೊಡಲಾದೀತು?

೩೯. ಎಲೈ ಮುನಿಗಳಿರಾ! ಈರೀತಿಯಾಗಿ ಆ ಯಮಕಿಂಕರರು ಹೇಳುವುದನ್ನು ಕೇಳಿ ಆ ಜೀವರು ತಾವು ಮಾಡಿಕೊಂಡಿದ್ದ ಆಸೆಯೆಲ್ಲವನ್ನೂ ತೊರೆದು ಹಸಿವಿನಿಂದಲೂ, ಬಾಯಾರಿಕೆಯಿಂದಲೂ ಬಳಲುತ್ತಿರುವರು. ಅನಂತರ ಅವರನ್ನು ದಾರುಣವಾದ ಶಸ್ತ್ರಗಳಿಂದ ಯಮದೂತರು ಹಿಂಸಿಸುವರು.

೪೦-೪೧. ಮುದ್ಗರ, ಕಬ್ಬಿಣದ ಕೋಲು, ಶಕ್ತಿ, ತೋಮರ, ಪಟ್ಟಿಸ, ಪರಿಘ, ಬಿಂಡಿಪಾಲ, ಗದೆ, ಪರಶು, ಬಾಣಗಳು ಇವುಗಳಿಂದ ಆ ಯಮದೂತರು ಸ್ವಲ್ಪವೂ ದಯೆಯಿಲ್ಲದೆ (ಹಿಂದಿನಿಂದ) ಬಡಿಯುತ್ತಿದ್ದರೆ ಮುಂದಿನಿಂದ ಸಿಂಹ, ಹುಲಿ ಮುಂತಾದ ದುಷ್ಟ ಮೃಗಗಳು ಕಿತ್ತು ತಿನ್ನುವುವು.

ನ ಪ್ರವೇಷ್ಟುಂ ನ ನಿರ್ಗಂತುಂ ಲಭಂತೇ ದುಃಖಿತಾ ಭೃಶಂ ।
ಸ್ವಕರ್ಮೋಪಹತಾಃ ಪಾಪಾಃ ಕ್ರಂದಮಾನಾಃ ಸುದಾರುಣಾಃ ॥ ೪೨ ॥

ತತ್ರ ಸಂಪೀಡ್ಯ ಸುಭೃಶಂ ಪ್ರವೇಶಂ ಯಮಕಿಂಕರೈಃ ।
ನೀಯಂತೇ ಪಾಪಿನಸ್ತತ್ರ ಯತ್ರ ತಿಷ್ಠೇತ್ಸ್ವಯಂ ಯಮಃ ॥ ೪೩ ॥

ಧರ್ಮಾತ್ಮಾ ಧರ್ಮಕೃದ್ದೇವಃ ಸರ್ವಸಂಯಮನೋ ಯಮಃ ।
ಏವಂ ಪಥಾತಿಕಷ್ಟೇನ ಪ್ರಾಪ್ತಾಃ ಪ್ರೇತಪುರಂ ನರಾಃ ॥ ೪೪ ॥

ಪ್ರಜ್ಞಾಪಿತಾಸ್ತದಾ ದೂತೈರ್ನಿವೇಶ್ಯಂತೇ ಯಮಾಗ್ರತಃ ।
ತತಸ್ತೇ ಪಾಪಕರ್ಮಾಣಸ್ತಂ ಪಶ್ಯಂತಿ ಭಯಾನಕಂ ॥ ೪೫ ॥

ಪಾಪಾಪವಿದ್ಧನಯನಾ ವಿಪರೀತಾತ್ಮಬುದ್ಧಯಃ ।
ದಂಷ್ಟ್ರಾಕರಾಲವದನಂ ಭ್ರುಕುಟೀಕುಟಿಲೇಕ್ಷಣಂ ॥ ೪೬ ॥

---

೪೨. ಆ ಪಾಪಿಗಳು ತಾವು ಮಾಡಿದ ಕರ್ಮಗಳಫಲವಾಗಿ ಮುಂದಕ್ಕೆ ಹೋಗಲೂ ಹಿಂದಕ್ಕೆಹೊರಡಲೂ, ಸಾಗದೆ ವಿಷ್ಟೈವಿಯಂತೆ ಗಟ್ಟಿಯಾಗಿ ದುಃಖ ದಿಂದ ಗೋಳಿಡುವರು.

೪೩. ಈರೀತಿಯಾಗಿ ಯಮಭಟರು ಪಾಪಿಗಳನ್ನು ದಾರಿಯಲ್ಲಿ ಚೆನ್ನಾಗಿ ಹಿಂಸಿಸಿದನಂತರ ಸ್ವಯಂ ಯಮಧರ್ಮರಾಜನು ಎಲ್ಲಿ ಇರುವನೋ ಅಲ್ಲಿಗೆ ಕರೆದುಕೊಂಡು ಹೋಗುವರು.

೪೪-೪೫. ಈರೀತಿಯಾಗಿ ಅತಿಕಷ್ಟಕರವಾದ ಮಾರ್ಗದಿಂದ ಯಮ ಪುರವನ್ನು ಪ್ರವೇಶಿಸಿದ ಜೀವರು, ದೂತರ ಮುಖಾಂತರ ಬಿನ್ನವಿಸಲ್ಪಟ್ಟು. ಧರ್ಮಾತ್ಮಕನೂ, ಧರ್ಮಕರ್ತೃವೂ, ಸರ್ವರನ್ನೂ ಸಂಯಮನ (ದಂಡನೆ) ಮಾಡುವವನೂ ಆದ ಯಮಧರ್ಮರಾಜನ ಮುಂದೆ ನಿಲ್ಲಿಸಲ್ಪಡುವರು. ಆಗ ಪಾಪಿಗಳ ಕಣ್ಣಿಗೆ ಧರ್ಮಪುರುಷನು ಘೋರಾಕೃತಿಯಿಂದ ತೋರುವನು.

೪೬-೫೦. ಪಾಪಕಾರ್ಯಾಸಕ್ತರಾಗಿ ತಮ್ಮ ಕಂಗಳನ್ನೂ ಮನಸ್ಸನ್ನೂ ಕೆಡಿಸಿಕೊಂಡಿದ್ದ ಆ ಜೀವರು ಯಮನನ್ನು ಭಯಂಕರಾಕಾರದಲ್ಲಿ ಕಾಣುವರು. ಆಗಿನ ಯಮಸ್ವರೂಪವನ್ನು ಕೇಳಿರಿ :— ಕೋರೆದಾಡೆಗಳಿಂದ ಭೀಷಣವಾಗಿರುವ ಮುಖ, ಹುಬ್ಬುಗಂಟುಹಾಕಿಕೊಂಡು ವಕ್ರವಾದ ನೋಟವನ್ನು ಬೀರುವ ಕಣ್ಣು

ಊರ್ಧ್ವಕೇಶಂ ಮಹಾಶ್ಮಶ್ರುಂ ಪ್ರಸ್ಫುರದಧರೋತ್ತರಂ ।
ಅಷ್ಟಾದಶಭುಜಂ ಕ್ರುದ್ಧಂ ನೀಲಾಂಜನಚಯೋಪಮಂ ॥ ೪೭ ॥

ಸರ್ವಾಯುಧೋದ್ಯತಕರಂ ತೀವ್ರದಂಡೇನ ಸಂಯುತಂ ।
ಮಹಾಮಹಿಷಮಾರೂಢಂ ದೀಪ್ತಾಗ್ನಿಸಮಲೋಚನಂ ॥ ೪೮ ॥

ರಕ್ತಮಾಲ್ಯಾಂಬರಧರಂ ಮಹಾಮೇಘಮಿವೋಚ್ಛ್ರಿತಂ ।
ಪ್ರಲಯಾಂಬುದನಿರ್ಘೋಷಂ ಪಿಬನ್ನಿವ ಮಹೋದಧಿಂ ॥ ೪೯ ॥

ಗ್ರಸಂತಮಿವ ತ್ರೈಲೋಕ್ಯಮುದ್ಗಿರಂತಮಿವಾನಲಂ ।
ಮೃತ್ಯುಂ ಚ ತತ್ಸಮೀಪಸ್ಥಂ ಕಾಲಾನಲಸಮಪ್ರಭಂ ॥ ೫೦ ॥

ಪ್ರಲಯಾನಲಸಂಕಾಶಂ ಕೃತಾಂತಂ ಚ ಭಯಾನಕಂ ।
ಮಾರೀ ಚೋಗ್ರಾ ಮಹಾಮಾರೀ ಕಾಲರಾತ್ರೀ ಚ ದಾರುಣಾ ॥ ೫೧ ॥

---

ಗಳು, ಮೇಲ್ಮುಖವಾದ ತಲೆಗೂದಲುಗಳು, ಉದ್ದುದ್ದವಾದ ಗಡ್ಡಮೀಸೆಗಳು, ನಡುಗುತ್ತಿರುವ ತುಟಿಗಳು, ಹದಿನೆಂಟು ತೋಳುಗಳು, ಕಾಡಿಗೆಯ ರಾಶಿಯಂತೆ ಕಪ್ಪಾದ ಕಾಂತಿ, ಆ ಕೈಗಳಲ್ಲೆಲ್ಲಾ ಒಂದೊಂದು ಬಗೆಯಾದ ಎತ್ತಿಹಿಡಿದ ಆಯುಧಗಳು, ಜೊತೆಗೆ ಭಯಂಕರವಾದ ದಂಡ ಬೇರೆ. ಇದಲ್ಲದೆ ಆತನು ಭಾರಿಯಾದ ಮಹಿಷದಮೇಲೆ ಕುಳಿತಿರುವನು. ಆತನ ಕಣ್ಣುಗಳು ಜ್ವಲಿಸುತ್ತಿರುವ ಅಗ್ನಿಯನ್ನು ಹೋಲುವುವು. ಮತ್ತು ಕೆಂಪಾದ ಹೂಗಳ ಮಾಲೆಗಳನ್ನೂ ಕೆಂಪು ಬಟ್ಟೆಗಳನ್ನೂ ಧರಿಸಿರುವನು. ಭಾರಿಯಾದ ಮೋಡದಂತೆ ಆತನು ಎತ್ತರವಾಗಿರುವನು. ಅಲ್ಲದೆ ಆತನ ಧ್ವನಿಯು ಪ್ರಳಯಕಾಲದ ಮೇಘದ ಮೊಳಗನ್ನು ಹೋಲುವುದು. ಆತನನ್ನು ಕಂಡರೆ, ಸಮುದ್ರವನ್ನೇ ಕುಡಿದುಬಿಡುವನೋ, ಮೂರುಲೋಕಗಳನ್ನೇ ನುಂಗುವನೋ, ಬೆಂಕಿಯನ್ನೇ ಕಕ್ಕುವನೋ ಎಂಬುದಾಗಿ ಭಾಸವಾಗುವುದು.

೫೧. ಆತನ ಬಳಿಯಲ್ಲಿ ಪ್ರಳಯಕಾಲದ ಅಗ್ನಿಯನ್ನು ಹೋಲುವ ಕಾಂತಿಯುಳ್ಳ ಮೃತ್ಯುವೂ, ಭಯಂಕರವಾದ ಕೃತಾಂತನೂ, ಮಹಾಕ್ರೂರರಾದ ಮಾರಿಯೂ, ಮಹಾಮಾರಿಯೂ, ಕಾಲರಾತ್ರಿಯೂ ನಿಂತಿರುವರು.

ವಿವಿಧಾ ವ್ಯಾಧಯಃ ಕಷ್ಟಾ ನಾನಾರೂಪಾ ಭಯಾವಹಾಃ ।
ಶಕ್ತಿಶೂಲಾಂಕುಶಧರಾಃ ಪಾಶಚಕ್ರಾಸಿಧಾರಿಣಃ ॥ ೫೨ ॥

ವಜ್ರದಂಡಧರಾ ರೌದ್ರಾಃ ಕ್ಷುರತೂಣಧನುರ್ಧರಾಃ ।
ಅಸಂಖ್ಯಾತಾ ಮಹಾವೀರ್ಯಾಃ ಕ್ರೂರಾಶ್ಚಾಂಜನಸಪ್ರಭಾಃ ॥ ೫೩ ॥

ಸರ್ವಾಯುಧೋದ್ಯತಕರಾ ಯಮದೂತಾ ಭಯಾನಕಾಃ ।
ಅನೇನ ಪರಿವಾರೇಣ ಮಹಾಘೋರೇಣ ಸಂವೃತಂ ॥ ೫೪ ॥

ಯಮಂ ಪಶ್ಯಂತಿ ಪಾಪಿಷ್ಠಾಶ್ಚಿತ್ರಗುಪ್ತಂ ವಿಭೀಷಣಂ ।
ನಿರ್ಭರ್ತ್ಸಯತಿ ಚಾತ್ಯರ್ಥಂ ಯಮಸ್ತಾನ್ಪಾಪಕಾರಿಣಃ ॥ ೫೫ ॥

ಚಿತ್ರಗುಪ್ತಸ್ತು ಭಗವಾನ್ಧರ್ಮವಾಕ್ಯೈಃ ಪ್ರಬೋಧಯನ್ ॥ ೫೬ ॥

॥ ಚಿತ್ರಗುಪ್ತ ಉವಾಚ ॥

ಭೋ ಭೋ ದುಷ್ಕೃತಕರ್ಮಾಣಃ ಪರದ್ರವ್ಯಾಪಹಾರಿಣಃ ।
ಗರ್ವಿತಾ ರೂಪವೀರ್ಯೇಣ ಪರದಾರವಿಮರ್ದಕಾಃ ॥ ೫೭ ॥

---

೫೨-೫೩. ಮತ್ತು ನಾನಾರೀತಿಯ ವ್ಯಾಧಿಗಳೂ, ಭಯಂಕರವಾದ ಬಗೆ ಬಗೆಯಾದ ಕಷ್ಟಗಳೂ, ಶಕ್ತಿ, ಶೂಲ, ಅಂಕುಶ, ಪಾಶ, ಚಕ್ರ, ಕತ್ತಿ, ವಜ್ರ ಮುಯವಾದ ದಂಡ, ಕ್ಷುರಗಳು ತುಂಬಿದ ಬತ್ತಳಿಕೆ, ಧನುಸ್ಸು ಮೊದಲಾದ ಆಯುಧಗಳನ್ನು ಧರಿಸಿ, ಕಾಡಿಗೆಯಂತೆ ಕಪ್ಪಾದ ಕಾಂತಿಯುಳ್ಳ, ಮಹಾಬಲಾ ಢ್ಯರೂ, ಕ್ರೂರಹೃದಯರೂ, ರೌದ್ರಾಕೃತಿಯುಳ್ಳವರೂ ಆದ ಲೆಕ್ಕವಿಲ್ಲದಷ್ಟು ಮಂದಿ ಯಮದೂತರೂ ಸುತ್ತುವರಿದಿರುವರು.

೫೪-೫೬. ಈರೀತಿ ಭಯಂಕರಾಕಾರವುಳ್ಳ ನಾನಾಯುಧಧಾರಿಗಳಾದ ಪರಿವಾರದವರಿಂದ ಸುತ್ತುವರಿಯಲ್ಪಟ್ಟಿರುವ ಆ ಯಮಧರ್ಮರಾಜನನ್ನೂ, ಭಯಂಕರನಾದ ಚಿತ್ರಗುಪ್ತನನ್ನೂ ಆ ಪಾಪಿಗಳು ಸಂದರ್ಶಿಸುವರು. ಆಗ ಯಮನು ಪಾಪಿಗಳನ್ನು ಬಹುವಾಗಿ ಭರ್ತ್ಸನೆ ಮಾಡುವನು. ಆಗ ಚಿತ್ರ ಗುಪ್ತನು ಪಾಪಿಗಳನ್ನುದ್ದೇಶಿಸಿ ಧರ್ಮಪೂರಿತವಾದ ಮಾತುಗಳನ್ನಾಡುತ್ತಾ ಅವರನ್ನು ಎಚ್ಚರಿಸುವನು.

೫೭. ಪರರ ದ್ರವ್ಯವನ್ನು ಅಪಹರಿಸುವುದು, ರೂಪದಿಂದಲೂ, ಬಲ ದಿಂದಲೂ, ಹೆಮ್ಮೆಪಡುತ್ತಾ ಪರಸ್ತ್ರೀಯರನ್ನು ಕೆಡಿಸುವುದು, ಇವೇ ಮೊದಲಾದ ಪಾಪಕಾರ್ಯಗಳಲ್ಲಿ ತೊಡಗಿದ್ದ ಪಾಪಿಗಳಿರಾ! ಕೇಳಿ.

ಯತ್ಸ್ವಯಂ ಕ್ರಿಯತೇ ಕರ್ಮ ತತ್ಸ್ವಯಂ ಭುಜ್ಯತೇ ಪುನಃ ।
ತತ್ಕಿಮಾತ್ಮೋಪಘಾತಾರ್ಥಂ ಭವದ್ಭಿರ್ದುಷ್ಕೃತಂ ಕೃತಂ ॥ ೫೮ ॥

ಇದಾನೀಂ ಕಿಂ ನು ಶೋಚಧ್ವಂ ಪೀಡ್ಯಮಾನಾಃ ಸ್ವಕರ್ಮಭಿಃ ।
ಭುಂಜಧ್ವಂ ಸ್ವಾನಿ ದುಃಖಾನಿ ನ ಹಿ ದೋಷೋಽಸ್ತಿ ಕಸ್ಯಚಿತ್ ॥ ೫೯ ॥

ಯ ಏತೇ ಪೃಥಿವೀಪಾಲಾಃ ಸಂಪ್ರಾಪ್ತಾ ಮತ್ಸಮೀಪತಃ ।
ಸ್ವಕೀಯೈಃ ಕರ್ಮಭಿರ್ಘೋರೈರ್ದುಷ್ಪ್ರಜ್ಞಾ ಬಲಗರ್ವಿತಾಃ ॥ ೬೦ ॥

ಭೋ ಭೋ ನೃಪಾ ದುರಾಚಾರಾಃ ಪ್ರಜಾವಿಧ್ವಂಸಕಾರಿಣಃ ।
ಅಲ್ಪಕಾಲಸ್ಯ ರಾಜ್ಯಸ್ಯ ಕೃತೇ ಕಿಂ ದುಷ್ಕೃತಂ ಕೃತಂ ॥ ೬೧ ॥

ರಾಜ್ಯಲೋಭೇನ ಮೋಹೇನ ಬಲಾದನ್ಯಾಯತಃ ಪ್ರಜಾಃ ।
ಯದ್ದಂಡಿತಾಃ ಫಲಂ ತಸ್ಯ ಭುಂಜಧ್ವಮಧುನಾ ನೃಪಾಃ ॥ ೬೨ ॥

---

೫೮. ತಾನು ಮಾಡಿದ ಕರ್ಮಫಲವನ್ನು ತಾನೇ ಅನುಭವಿಸಬೇಕೇ ವಿನಹ ಮತ್ತೆ ಬೇರೆ ಅದಕ್ಕೆ ಪರಿಹಾರವಿಲ್ಲ. ಹೀಗಿರುವುದರಿಂದ ನೀವೇತಕ್ಕೆ ನಿಮ್ಮನ್ನು ಹಾಳುಮಾಡಿಕೊಳ್ಳಲು ಈರೀತಿ ಪಾಪಕಾರ್ಯಗಳನ್ನು ಆಚರಿಸಿದಿರಿ?

೫೯. ನೀವು ಮಾಡಿದ ಕರ್ಮಗಳೇ ನಿಮ್ಮನ್ನು ಈಗ ಪೀಡಿಸುತ್ತಿರುವುವು. ಏತಕ್ಕೆ ದುಃಖಪಡುತ್ತಿರುವಿರಿ? ನೀವು ಮಾಡಿಕೊಂಡ ಈ ಸಂಕಟಗಳನ್ನು ನೀವೇ ಅನುಭವಿಸಿ. ಇದರಲ್ಲಿ ಮತ್ತಾರ ತಪ್ಪೂ ಇಲ್ಲ.

೬೦. ಎಲೈ ಭೂಪಾಲಕರಿರಾ! ವಿವೇಕವಿಲ್ಲದೆ ನಾವೇ ಬಲಿಷ್ಠರೆಂಬ ಹೆಮ್ಮೆಯಿಂದ, ಅತಿಕ್ರೂರವಾದ ಕೆಟ್ಟಕೆಲಸಗಳನ್ನು ಮಾಡಿ ಈಗ ನನ್ನ ಬಳಿಗೆ ಬಂದಿರುವಿರಲ್ಲವೇ? ನೀವು ಈಗ ಕೇಳಿರಿ.

೬೧. ಎಲೈ ಕೆಟ್ಟನಡತೆಗಳಿಂದ ಪ್ರಜೆಗಳನ್ನು ಗೋಳು ಹೊಯಿದುಕೊಂಡ ಭೂಪತಿಗಳಿರಾ! ಸ್ವಲ್ಪಕಾಲ ಮಾತ್ರ ನಿಲ್ಲುವಂತಹ ರಾಜ್ಯಕ್ಕಾಗಿ ಏತಕ್ಕೆ ಮಾಡಬಾರದ ಕೆಲಸಗಳನ್ನು ಮಾಡಿದಿರಿ?

೬೨. ನೀವು ರಾಜ್ಯದಮೇಲಣ ದುರಾಸೆಯಿಂದಲೂ, ಮೋಹದಿಂದಲೂ, ಪ್ರಜೆಗಳನ್ನು ಅನ್ಯಾಯವಾದರೀತಿಯಲ್ಲಿ ಬಲಾತ್ಕಾರದಿಂದ ಹಿಂಸೆ ಮಾಡಿದಿರಲ್ಲವೇ? ಅದಕ್ಕೆ ತಕ್ಕ ಫಲವನ್ನು ಈಗ ಅನುಭವಿಸಿರಿ.

ಕುತೋ ರಾಜ್ಯಂ ಕಲತ್ರಂ ಚ ಯದರ್ಥಮಶುಭಂ ಕೃತಂ ।
ತತ್ಸರ್ವಂ ಸಂಪರಿತ್ಯಜ್ಯ ಯೂಯಮೇಕಾಕಿನಃ ಸ್ಥಿತಾಃ ॥ ೬೩ ॥

ಪಶ್ಯಾಮೋ ನ ಬಲಂ ಸರ್ವಂ ಯೇನ ವಿಧ್ವಂಸಿತಾಃ ಪ್ರಜಾಃ ।
ಯಮದೂತೈಃ ಪಾತ್ಯಮಾನಾ ಅಧುನಾ ಕೀದೃಶಂ ಫಲಂ ॥ ೬೪ ॥

॥ ವ್ಯಾಸ ಉವಾಚ ॥

ಏವಂ ಬಹುವಿಧೈರ್ವಾಕ್ಯೈರುಪಾಲಬ್ಧಾ ಯಮೇನ ತೇ ।
ಶೋಚಂತಃ ಸ್ವಾನಿ ಕರ್ಮಾಣಿ ತೂಷ್ಣೀಂ ತಿಷ್ಠಂತಿ ಪಾರ್ಥಿವಾಃ ॥ ೬೫ ॥

ಇತಿ ಕರ್ಮ ಸಮಾದಿಶ್ಯ ನೃಪಾಣಾಂ ಧರ್ಮರಾಟ್ಸ್ವಯಂ ।
ತತ್ಪಾತಕವಿಶುದ್ಧ್ಯರ್ಥಮಿದಂ ವಚನಮಬ್ರವೀತ್ ॥ ೬೬ ॥

---

೬೩. ಯಾವುದಕ್ಕೋಸ್ಕರವಾಗಿ ನೀವು ಇಷ್ಟು ಅಕಾರ್ಯಗಳನ್ನು ಮಾಡಿದಿರೋ ಆ ರಾಜ್ಯವಾಗಲೀ ಕಳತ್ರ (ಹೆಂಡತಿ) ವಾಗಲೀ ಈಗ ಎಲ್ಲಿರುವುದು? ಅದೆಲ್ಲವನ್ನೂ ಬಿಟ್ಟು ನೀವು ಈಗ ಒಂಟಿಯಾಗಿ ನಿಂತಿರುವಿರಿ.

೬೪. ಪ್ರಜೆಗಳೆಲ್ಲರನ್ನೂ ನೀವು ಆಗ ಪೀಡಿಸಿದ ಬಲವು ಈಗ ಎಲ್ಲಿ ಹೋಯಿತು? ಕಾಣುವುದೇ ಇಲ್ಲವಲ್ಲಾ! ನೀವು ಮಾಡಿದ ಆ ಕರ್ಮಗಳಿಗೆ ಎಂತಹ ಫಲವೆಂಬುದನ್ನು ಈಗ ಯಮದೂತರು ಕಲಿಸುವರು.

೬೫. ಎಲೈ ಮುನಿಗಳಿರಾ! ಈರೀತಿಯಾಗಿ ಯಮನಿಂದಲೂ (ಅವನ ಕಡೆಯವರಿಂದಲೂ) ನಾನಾವಿಧವಾದ ಮಾತುಗಳಿಂದ ಹಂಗಿಸಲ್ಪಡುತ್ತಾ ಆ ಭೂಪಾಲಕರು ತಾವು ಮಾಡಿದ ಕರ್ಮಗಳಿಗಾಗಿ ಮರುಗುತ್ತಾ ಸುಮ್ಮನೆ ನಿಲ್ಲುವರು.

೬೬. ಈರೀತಿಯಾಗಿ ಆ ಧರ್ಮರಾಜನು ತಾನೇ ಸಾಕ್ಷಾತ್ತಾಗಿ ಅವರು ಮಾಡಿದ ಕೆಲಸಗಳನ್ನು ಎತ್ತಿ ತೋರಿಸಿ ಆ ಪಾಪಗಳನ್ನು ಪರಿಹರಿಸಲು ಈರೀತಿ ಹೇಳುವನು.

॥ ಯಮ ಉವಾಚ ॥

ಭೋ ಭೋಶ್ಚಂಡ ಮಹಾಚಂಡ ಗೃಹೀತ್ವಾ ನೃಪತೀನಿಮಾನ್ ।
ವಿಶೋಧಯಧ್ವಂ ಪಾಪೇಭ್ಯಃ ಕ್ರಮೇಣ ನರಕಾಗ್ನಿಷು ॥ ೬೭ ॥

॥ ವ್ಯಾಸ ಉವಾಚ ॥

ತತಃ ಶೀಘ್ರಂ ಸಮುತ್ಥಾಯ ನೃಪಾನ್ಸಂಗೃಹ್ಯ ಪಾದಯೋಃ ।
ಭ್ರಾಮಯಿತ್ವಾ ತು ವೇಗೇನ ಕ್ಷಿಪ್ತ್ವಾ ಚೋರ್ಧ್ವಂ ಪ್ರಗೃಹ್ಯ ಚ ॥ ೬೮ ॥

ತತ್ತತ್ಪಾಪಪ್ರಮಾಣೇನ ಯಮದೂತಾಃ ಶಿಲಾತಲೇ ।
ಆಸ್ಫೋಟಯಂತಿ ತರಸಾ ವಜ್ರೇಣೇವ ಮಹಾದ್ರುಮಂ ॥ ೬೯ ॥

ತತಸ್ತು ರಕ್ತಂ ಸ್ರೋತೋಭಿಃ ಸ್ರವತೇ ಜರ್ಜರೀಕೃತೇಃ ।
ನಿಃಸಂಜ್ಞಃ ಸ ತದಾ ದೇಹೀ ನಿಶ್ಚೇಷ್ಟಶ್ಚ ಪ್ರಜಾಯತೇ ॥ ೭೦ ॥

---

೬೭. "ಎಲೈ ಚಂಡನೇ! ಈ ನರಪತಿಗಳನ್ನು ಕರದುಕೊಂಡು ಹೋಗಿ ಕ್ರಮವಾಗಿ ನರಕಗಳಲ್ಲಿ ಶಿಕ್ಷೆಗಳನ್ನು ಕೊಟ್ಟು ಪಾಪಗಳಿಂದ ಬಿಡುಗಡೆ ಯಾಗುವಂತೆ ಮಾಡಿರಿ" ಎನ್ನುವನು.

೬೮-೬೯. ಎಲೈ ಮುನಿಗಳಿರಾ! ಈರೀತಿಯಾಗಿ ಯಮಧರ್ಮ ರಾಜನು ಅಪ್ಪಣೆಮಾಡುತ್ತಲೇ, ಯಮದೂತರು ಸರ್ರನೆದ್ದು ಬಂದು ಆ ಅರಸ ರನ್ನು ಕಾಲುಗಳಿಂದ ಹಿಡಿದುಕೊಂಡು, ಜೋರಾಗಿ ತಿರುಗಿಸಿ ಮೇಲಕ್ಕೆಸೆಯು ವರು. ಅನಂತರ ಆತುಕೊಳ್ಳುವರು. ಬಳಿಕ, ಭಾಯರದಮೇಲೆ ಸಿಡಿಲು ತಿರಗುವಂತೆ, ಅವರು ಮಾಡಿದ ಆಯಾ ಪಾಪಗಳ ಪ್ರಮಾಣವನ್ನು ಅನುಸರಿಸಿ ಪಾಪಿಗಳನ್ನು ವೇಗದಿಂದ ಬಂಡೆಯಮೇಲೆ ಅಪ್ಪಳಿಸುವರು.

೭೦. ಅನಂತರ ಆ ಜೀವನು ಮೈಕೈಯೆಲ್ಲಾ ಅಜ್ಜುಬುಜ್ಜಿಯಾಗಿ, ರಕ್ತನಾಳಗಳೆಲ್ಲವೂ ಕಿತ್ತುಹೋಗಿ, ರಕ್ತವನ್ನು ಕಾರುವನು. ಆಗ ಅವನು ಮೂರ್ಛಿತನಾಗಿ ಅಲುಗಾಡದೆ ಸುಮ್ಮನೆ ಬಿದ್ದಿರುವನು.

ತತಃ ಸ ವಾಯುನಾ ಸ್ಪೃಷ್ಟಃ ಶನೈರುಜ್ಜೀವತೇ ಪುನಃ ।
ತತಃ ಪಾಪವಿಶುದ್ಧ್ಯರ್ಥಂ ಕ್ಷಿಪಂತಿ ನರಕಾರ್ಣವೇ ॥ ೭೧ ॥

ಅನ್ಯಾಂಶ್ಚ ತೇ ತದಾ ದೂತಾಃ ಪಾಪಕರ್ಮರತಾನ್ನರಾನ್ ।
ನಿವೇದಯಂತಿ ವಿಪ್ರೇಂದ್ರಾ ಯಮಾಯ ಭೃಶದುಃಖಿತಾನ್ ॥ ೭೨ ॥

॥ ಯಮದೂತಾ ಊಚುಃ ॥

ಏಷ ದೇವ ತವಾದೇಶಾದಸ್ಮಾಭಿರ್ಮೋಹಿತೋ ಭೃಶಂ ।
ಆನೀತೋ ಧರ್ಮವಿಮುಖಃ ಸದಾ ಪಾಪರತಃ ಪರಃ ॥ ೭೩ ॥

ಏಷ ಲುಬ್ಧೋ ದುರಾಚಾರೋ ಮಹಾಪಾತಕಸಂಯುತಃ ।
ಉಪಪಾತಕಕರ್ತಾ ಚ ಸದಾ ಹಿಂಸಾರತೋಽಶುಚಿಃ ॥ ೭೪ ॥

---

೭೧. ಅನಂತರ ಸ್ವಲ್ಪಗಾಳಿಯು ಬೀಸಲು ಮರಳಿ ಎಚ್ಚರಹೊಂದುವನು. ಬಳಿಕ ಪಾಪ ಪರಿಶೋಧನೆಗಾಗಿ ಅವನನ್ನು ಸಾಗರದಂತೆ ಅಪಾರವಾದ ನರಕಗಳಲ್ಲಿ ಎಸೆಯುವರು.

೭೨. ಆಗ ಯಮದೂತರು ತಾವು ಮಾಡಿದ ಕೆಲಸಗಳಿಗಾಗಿ ವ್ಯಥೆಪಡುತ್ತಿರುವ ಪಾಪ ಕಾರ್ಯಾಸಕ್ತರಾದ ಇತರ ಮನುಷ್ಯರನ್ನು ಆ ಧರ್ಮರಾಜನಿಗೆ ಬಿನ್ನವಿಸುವರು.

೭೩. " ಓ ದೇವಾ! ಈ ಮನುಷ್ಯನು ಧರ್ಮಕಾರ್ಯಗಳನ್ನೇ ಅರಿಯನು. ಸರ್ವದಾ ಪಾಪಕಾರ್ಯಗಳಲ್ಲೇ ತೊಡಗಿರುವನು. ಹೆಚ್ಚಾಗಿ ಅಜ್ಞಾನದಿಂದ ಕೂಡಿರುವನು. ಇವನನ್ನು ನಿನ್ನ ಅಪ್ಪಣೆಯಂತೆ ಕರೆತಂದಿರುವೆವು.

೭೪. " ಇವನು ಮಹಾ ದುರಾಚಾರಿಯು. ಕಡು ಲೋಭಿಯು. ಮಹಾ ಪಾಪಕಾರ್ಯಗಳನ್ನೇ ಮಾಡಿರುವನು. ಉಪಪಾತಕಗಳಿಗೆ ಲೆಕ್ಕವೇ ಇಲ್ಲ. ಸರ್ವದಾ ಹಿಂಸೆಯನ್ನೇ ಮಾಡುತ್ತಾ ಶೌಚವೇನೆಂಬುದನ್ನೇ ಅರಿಯನು.

ಅಗಮ್ಯಾಗಾಮೀ ದುಷ್ಟಾತ್ಮಾ ಪರದ್ರವ್ಯಾಪಹಾರಕಃ ।
ಕನ್ಯಾಕ್ರಯೀ ಕೂಟಸಾಕ್ಷೀ ಕೃತಘ್ನೋ ಮಿತ್ರವಂಚಕಃ ॥ ೭೫ ॥

ಅನೇನ ಮದಮತ್ತೇನ ಸದಾ ಧರ್ಮೋ ವಿನಿಂದಿತಃ ।
ಪಾಪಮಾಚರಿತಂ ಕರ್ಮ ಮರ್ತ್ಯಲೋಕೇ ದುರಾತ್ಮನಾ ॥ ೭೬ ॥

ಇದಾನೀಮಸ್ಯ ದೇವೇಶ ನಿಗ್ರಹಾನುಗ್ರಹೌ ವದ ।
ಪ್ರಭುರಸ್ಯ ಕ್ರಿಯಾಯೋಗೇ ವಯಂ ವಾ ಪರಿಪಂಥಿನಃ ॥ ೭೭ ॥

॥ ವ್ಯಾಸ ಉವಾಚ ॥

ಇತಿ ವಿಜ್ಞಾಪ್ಯ ದೇವೇಶಂ ನ್ಯಸ್ಯಾಗ್ರೇ ಪಾಪಕಾರಿಣಂ ।
ನರಕಾಣಾಂ ಸಹಸ್ರೇಷು ಲಕ್ಷಕೋಟಿಶತೇಷು ಚ ॥ ೭೮ ॥

---

೭೫. "ಈ ದುಷ್ಟನು ಅಗಮ್ಯಾಗಮನ ಮಾಡಿರುವನು. ಈ ಪಾಪಿಯು ಪರದ್ರವ್ಯವನ್ನು ಅಪಹರಿಸಿರುವನು. ಇವನು ಕನ್ಯಾ ವಿಕ್ರಯವನ್ನು ಮಾಡಿರುವನು. ಇವನು ಸುಳ್ಳುಸಾಕ್ಷ್ಯವನ್ನು ಹೇಳಿರುವನು. ಇವನು ಕೃತಘ್ನನು. ಇವನು ಮಿತ್ರದ್ರೋಹಿಯು.

೭೬. "ಈ ಮದೋನ್ಮತ್ತನು ಸರ್ವದಾ ಧರ್ಮವನ್ನು ಕೆಡಿಸಿದವನು. (ಧರ್ಮವೆಂಬುದಾಗಿ ಹೇಳುತ್ತಾ ಅಧರ್ಮವಾಚರಿಸಿದವನು.) ಈ ದುಷ್ಟನು ಭೂಲೋಕದಲ್ಲಿ ಕೆಟ್ಟ ಕೆಲಸಗಳನ್ನೇ ಮಾಡುತ್ತಿದ್ದವನು.

೭೭. "ಓ ದೇವೇಶ! ಈಗೀಪಾಪಿಗೆ ನಿಗ್ರಹ ಮಾಡಬೇಕೆ? ಎಂಬುದನ್ನು ತಿಳಿಸು. ಇವರಿಗೆ ಶಿಕ್ಷೆ ವಿಧಿಸಲು, ಪ್ರಭುವಾದರೂ ಸರಿ, ಇಲ್ಲವಾದರೆ ನಾವಾದರೂ ಅಪ್ಪಣೆಯಂತೆ ನೆರವೇರಿಸಲು ಸಿದ್ಧರಿರುವೆವು ಎನ್ನುವರು.

೭೮. ಎಲೈ ಮುನಿಗಳಿರಾ! ಈರೀತಿಯಾಗಿ ಯಮಧರ್ಮರಾಜನ ಮುಂದೆ ಆಯಾ ಪಾಪಿಗಳನ್ನು ನಿಲ್ಲಿಸುತ್ತಾ, ಅವನು ಮಾಡಿದ ಪಾಪಕೃತ್ಯಗಳನ್ನು ಬಿನ್ನವಿಸಿ ಅನಂತರ ಅವುಗಳಿಗನುಗುಣವಾಗಿ, ನೂರಾರು, ಸಾವಿರಾರು, ಲಕ್ಷಗಟ್ಟಲೆ, ಕೋಟಿಗಟ್ಟಲೆ ಇರುವ ನರಕಗಳಲ್ಲಿ ನೂಕುವರು.

ಕಿಂಕರಾಸ್ತೇ ತತೋ ಯಾಂತಿ ಗ್ರಹೀತುಮುಪರಾನ್ನರಾನ್ ।
ಪ್ರತಿಪನ್ನೇ ಕೃತೇ ದೋಷೇ ಯಮೋ ವೈ ಪಾಪಕಾರಿಣಾಂ ॥ ೭೯ ॥

ಸಮಾದಿಶತಿ ತಾನ್ಘೋರಾನ್ನಿಗ್ರಹಾಯ ಸ್ವಕಿಂಕರಾನ್ ।
ಯಥಾ ಯಸ್ಯ ವಿನಿರ್ದಿಷ್ಟೋ ವಸಿಷ್ಠಾದ್ಯೈರ್ವಿನಿಗ್ರಹಃ ॥ ೮೦ ॥

ಪಾಪಸ್ಯ ತದ್ಭೃಶಂ ಕ್ರುದ್ಧಾಃ ಕುರ್ವಂತಿ ಯಮಕಿಂಕರಾಃ ।
ಅಂಕುಶೈರ್ಮುದ್ಗರೈರ್ದಂಡೈಃ ಕ್ರಕಚೈಃ ಶಕ್ತಿತೋಮರೈಃ ॥ ೮೧ ॥

ಖಡ್ಗಶೂಲನಿಪಾತೈಶ್ಚ ಭಿದ್ಯಂತೇ ಪಾಪಕಾರಿಣಃ ।
ನರಕಾಣಾಂ ಸಹಸ್ರೇಷು ಲಕ್ಷಕೋಟಿಶತೇಷು ಚ ॥ ೮೨ ॥

ಸ್ವಕರ್ಮೋಪಾರ್ಜಿತೈರ್ದೋಷೈಃ ಪೀಡ್ಯಂತೇ ಯಮಕಿಂಕರೈಃ ।
ಶೃಣುಧ್ವಂ ನರಕಾಣಾಂ ಚ ಸ್ವರೂಪಂ ಚ ಭಯಂಕರಂ ॥ ೮೩ ॥

---

೭೯-೮೧. ಬಳಿಕ ಆ ಯಮಕಿಂಕರರು ಬೇರೆ ಪಾಪಿಗಳನ್ನು ಕರೆತರಲು ಹೋಗುವರು. ಪಾಪಿಗಳು ಮಾಡಿದ ದೋಷವು ಸ್ಥಿರಪಟ್ಟನಂತರ ಯಮನು ಅವರನ್ನು ದಂಡಿಸಲು ತನ್ನ ಘೋರಾಕೃತಿಯ ಭಟರನ್ನು ಅಪ್ಪಣೆ ಮಾಡುವನು. ವಸಿಷ್ಠಾದಿ ಮಹರ್ಷಿಗಳು ಯಾವ ಯಾವ ಪಾಪಕ್ಕೆ ಯಾವ ಯಾವ ದಂಡನೆ ಯನ್ನು ವಿಧಿಸಿರುವರೋ ಆಯಾ ದಂಡನೆಯನ್ನು ಯಮನ ಭಟರು ಮಿತಿಮೀರಿ ಕೋಪಗೊಂಡು ಕೊಡುವರು.

೮೨-೮೩. ಆ ಪಾಪಿಗಳನ್ನು ಅಂಕುಶಗಳಿಂದಲೂ, ಬಡಿಗೆಗಳಿಂದಲೂ, ಮುದ್ಗರಗಳಿಂದಲೂ, ಗರಗಸಗಳಿಂದಲೂ, ಶಕ್ತಿಗಳಿಂದಲೂ, ತೋಮರಗಳಿಂದಲೂ, ಖಡ್ಗಗಳಿಂದಲೂ, ಶೂಲಗಳಿಂದಲೂ ಇರಿಯುವರು. ಅನಂತರ ಅವರನ್ನು ಹಿಂದೆ ಹೇಳಿದ ನೂರಾರು, ಸಾವಿರಾರು, ಲಕ್ಷಗಟ್ಟಲೆ, ಕೋಟಿಗಟ್ಟಲೆ ಇರುವ ನರಕಗಳಲ್ಲಿ ಅವರವರು ಮಾಡಿದ ದುಷ್ಕರ್ಮಗಳಿಗಾಗಿ ಶಿಕ್ಷೆಮಾಡುವರು. ಎಲೈ ಮುನಿಗಳಿರಾ! ಆ ನರಕಗಳ ಭಯಂಕರ ಸ್ವರೂಪವನ್ನೂ,-

ನಾಮಾನಿ ಚ ಪ್ರಮಾಣಂ ಚ ಯೇನ ಯಾಂತಿ ನರಾಶ್ಚ ತಾನ್ ।
ಮಹಾವಾಚೀತಿ ವಿಖ್ಯಾತಂ ನರಕಂ ಶೋಣಿತಪ್ಲುತಂ ॥ ೮೪ ॥

ವಜ್ರಕಂಟಕಸಂಮಿಶ್ರಂ ಯೋಜನಾಯುತವಿಸ್ತೃತಂ ।
ತತ್ರ ಸಂಪೀಡ್ಯತೇ ಮಗ್ನೋ ಭಿದ್ಯತೇ ವಜ್ರಕಂಟಕೇ ॥ ೮೫ ॥

ವರ್ಷಲಕ್ಷಂ ಮಹಾಘೋರಂ ಗೋಘಾತೀ ನರಕೇ ನರಃ ।
ಯೋಜನಾನಾಂ ಶತಂ ಲಕ್ಷಂ ಕುಂಭೀಪಾಕಂ ಸುದಾರುಣಂ ॥ ೮೬ ॥

ತಾಮ್ರಕುಂಭವತೀ ದೀಪ್ತಾ ವಾಲುಕಾಂಗಾರಸಂವೃತಾ ।
ಬ್ರಹ್ಮಹಾ ಭೂಮಿಹರ್ತಾ ಚ ನಿಕ್ಷೇಪಸ್ಯಾಪಹಾರಕಃ ॥ ೮೭ ॥

---

೮೪. ಹೆಸರುಗಳನ್ನೂ, ಪ್ರಮಾಣವನ್ನೂ, ಮನುಷ್ಯರು ಯಾವ ಪಾಪಕ್ಕಾಗಿ ಅಲ್ಲಿಗೆ ಹೋಗುವರೆಂಬುದನ್ನೂ ವಿವರಿಸುವೆನು. ಮಹಾವೀಚಿಯೆಂಬ ಪ್ರಸಿದ್ಧವಾದ ನರಕವಿರುವುದು. ಇದರಲ್ಲಿ ರಕ್ತವು ಹರಿಯುತ್ತಿರುವುದು.

೮೫. ಇದರಲ್ಲಿ ವಜ್ರಾಯುಧದಂತೆ ಕಠೋರವಾದ ಮುಳ್ಳುಗಳು ಅಡಗಿರುವುವು. ಇದು ಹತ್ತುಸಹಸ್ರ ಯೋಜನಗಳಷ್ಟು ವಿಸ್ತಾರವಾಗಿರುವುದು. ಇದರಲ್ಲಿ ಬಿದ್ದವನು ರಕ್ತದಲ್ಲಿ ಮುಳುಗಿ, ಮುಳ್ಳುಗಳಿಂದ ಮೈಯೆಲ್ಲಾ ಕ್ಷತವಿಕ್ಷತವಾಗಿ ಪೀಡೆಯನ್ನನುಭವಿಸುವನು.

೮೬. ಈ ನರಕದಲ್ಲಿ ಗೋಹತ್ಯ ಮಾಡಿದ ಪಾಪಿಯು ಲಕ್ಷವರ್ಷಗಳ ಕಾಲ ಬಿದ್ದು ಒದ್ದಾಡುವನು. ಕುಂಭೀಪಾಕವೆಂಬ ಭಯಂಕರವಾದ ನರಕವು ಒಂದುಕೋಟಿ ಯೋಜನಗಳಷ್ಟು ಅಗಲವಾಗಿರುವುದು.

೮೭. ಅಲ್ಲಿ ಸಣ್ಣ ಮರಳಿನಂತಿರುವ ಬೆಂಕಿಯ ತುಣುಕುಗಳಿಂದ ತುಂಬಿರುವ ತಾಮ್ರದ ಕುಂಭಗಳಿರುವುವು. ಇದರಲ್ಲಿ, ಬ್ರಹ್ಮಹತ್ಯೆ ಮಾಡಿದವನೂ, ಭೂಮಿಯನ್ನು ಅಪಹರಿಸಿದವನೂ, ಅಡುವಿಟ್ಟ ವಸ್ತುವನ್ನು ದಕ್ಕಿಸಿಕೊಂಡವನೂ–

ದಹ್ಯಂತೇ ತತ್ರ ಸಂಕ್ಷಿಪ್ತಾ ಯಾವದಾಭೂತಸಂಪ್ಲವಂ ।
ರೌರವೋ ವಜ್ರನಾರಾಚೈಃ ಪ್ರಜ್ವಲದ್ಭಿಃ ಸಮಾವೃತಃ ॥ ೮೮ ॥

ಯೋಜನಾನಾಂ ಸಹಸ್ರಾಣಿ ಷಷ್ಟಿರಾಯಾಮವಿಸ್ತರೈಃ ।
ಭಿದ್ಯಂತೇ ತತ್ರ ನಾರಾಚೈಃ ಸಜ್ವಾಲೈರ್ನರಕೇ ನರಾಃ ॥ ೮೯ ॥

ಇಕ್ಷುವತ್ತತ್ರ ಪೀಡ್ಯಂತೇ ಯೇ ನರಾಃ ಕೂಟಸಾಕ್ಷಿಣಃ ।
ಅಯೋಮಯಂ ಪ್ರಜ್ವಲಿತಂ ಮಂಜೂಷಂ ನರಕಂ ಸ್ಮೃತಂ ॥ ೯೦ ॥

ನಿಕ್ಷಿಪ್ತಾಸ್ತತ್ರ ದಹ್ಯಂತೇ ಬಂದಿಗ್ರಾಹಕೃತಾಶ್ಚ ಯೇ ।
ಅಪ್ರತಿಷ್ಠೇತಿ ನರಕಂ ಪೂಯಮೂತ್ರಪುರೀಷಕಂ ॥ ೯೧ ॥

---

೮೮. ಎಸೆಯಲ್ಪಟ್ಟು ಪ್ರಳಯಕಾಲದವರೆಗೂ (ಪ್ರಳಯ) ಸುಡಲ್ಪಡುವರು. ರೌರವವೆಂಬ ನರಕವು ಉರಿಯೇಳುತ್ತಿರುವ ವಜ್ರಮಯವಾದ ಬಾಣಗಳಿಂದ ಆವರಿಸಲ್ಪಟ್ಟು–

೮೯. ಅರುವತ್ತು ಯೋಜನಗಳು ಉದ್ದವಾಗಿಯೂ ಅರುವತ್ತು ಯೋಜನಗಳು ಅಗಲವಾಗಿಯೂ ಇರುವುದು. ಅಲ್ಲಿ ಎಸೆಯಲ್ಪಡುವರು. ಉರಿಯುಗುಳುತ್ತಿರುವ ಆ ಬಾಣಗಳಿಂದ ಚುಚ್ಚಲ್ಪಡುವರು.

೯೦. ಅದರಲ್ಲಿ ಸುಳ್ಳುಸಾಕ್ಷ್ಯ ಹೇಳಿದ ಪಾಪಿಗಳು ಗಾಣಕ್ಕೆ ಕೊಟ್ಟ ಕಬ್ಬಿನಂತೆ ಪೀಡಿಸಲ್ಪಡುವರು. ಮಂಜೂಷವೆಂಬ ನರಕವು ಕಬ್ಬಿಣದ ಪೆಟ್ಟಿಗೆಯಂತಿದ್ದು ಸರ್ವದಾ (ಕೆಳಗೆ ಉರಿಹಾಕಲ್ಪಟ್ಟು) ಜ್ವಾಲೆಗಳು ಏರುತ್ತಿರುವುದು.

೯೧. ಇದರಲ್ಲಿ, ನಿಷ್ಕಾರಣವಾಗಿ ಯಾರು ಸೆರೆಹಿಡಿಯುವರೋ ಅಂಥವರನ್ನು ನೂಕಿ ಸುಡುವರು. ಅಪ್ರತಿಷ್ಠವೆಂಬ ಬೇರೊಂದು ನರಕವಿರುವುದು. ಅದರಲ್ಲಿ ಕೀವು, ಮೂತ್ರ, ಮಲಗಳೇ ತುಂಬಿರುವುವು.

**ಅಧೋಮುಖಃ ಪತೇತ್ತತ್ರ ಬ್ರಾಹ್ಮಣಸ್ಯೋಪಪೀಡಕಃ ।**
**ಲಾಕ್ಷಾಪ್ರಜ್ವಲಿತಂ ಘೋರಂ ನರಕಂ ತು ವಿಲೇಪಕಂ ॥ ೯೨ ॥**

**ನಿಮಗ್ನಾಸ್ತತ್ರ ದಹ್ಯಂತೇ ಮದ್ಯಪಾನೇ ದ್ವಿಜೋತ್ತಮಾಃ ।**
**ಮಹಾಪ್ರಭೇತಿ ನರಕಂ ದೀಪ್ತಶೂಲಮಹೋಚ್ಛ್ರಯಂ ॥ ೯೩ ॥**

**ತತ್ರ ಶೂಲೇನ ಭಿದ್ಯಂತೇ ಪತಿಭಾರ್ಯೋಪಭೇದಿನಃ ।**
**ನರಕಂ ಚ ಮಹಾಘೋರಂ ಜಯಂತೀ ಚಾಯಸೀ ಶಿಲಾ ॥ ೯೪ ॥**

**ತಯಾ ಚಾಕ್ರಮ್ಯತೇ ಪಾಪಃ ಪರದಾರೋಪಸೇವಕಃ ।**
**ನರಕಂ ಶಾಲ್ಮಲಾಖ್ಯಂ ತು ಪ್ರದೀಪ್ತದೃಢಕಂಟಕಂ ॥ ೯೫ ॥**

---

೯೨. ಈ ನರಕದಲ್ಲಿ, ಬ್ರಾಹ್ಮಣರನ್ನು ಹಿಂಸೆಮಾಡಿದವನು ಕೆಳಮುಖನಾಗಿ ಬೀಳುವನು. ಎಲೈ ಮುನಿಗಳಿರಾ! ವಿಲೇಪಕವೆಂಬ ಮತ್ತೊಂದು ಘೋರವಾದ ನರಕವಿರುವುದು. ಅದರಲ್ಲಿ ಸರ್ವದಾ ' ಅರಗು ಕಾಯಿಸಲ್ಪಡುತ್ತಿರುವುದು.

೯೩. ಅದರಲ್ಲಿ ಮದ್ಯಪಾಯಿಗಳನ್ನು ಹಾಕಿ ಬೇಯಿಸುವರು. ಮಹಾಪ್ರಭವೆಂಬ ಮತ್ತೊಂದು ನರಕವಿರುವುದು. ಅದರಲ್ಲಿ ಉರಿಯನ್ನು ಉಗುಳುತ್ತಿರುವ ಶೂಲಗಳು ಇರುವುವು.

೯೪. ಯಾರು ಗಂಡನನ್ನೂ ಹೆಂಡತಿಯನ್ನೂ ಅಗಲಿಸುವರೋ ಆ ಪಾಪಿಗಳು ಈ ನರಕದಲ್ಲಿ ಬಿದ್ದು ಶೂಲದಿಂದ ಭೇದಿಸಲ್ಪಡುವರು. ಜಯಂತಿಯೆಂಬ ಅತಿಘೋರವಾದ ನರಕವಿರುವುದು. ಇದರಲ್ಲಿ ಕಬ್ಬಿಣದ ಬಂಡೆಯಿರುವುದು.

೯೫. ಅದರಲ್ಲಿ ಪರದಾರಲಂಪಟನಾದ ಪುರುಷನು ಆ ಅಯೋಮಯವಾದ ಶಿಲೆಯಿಂದ ಪೀಡಿಸಲ್ಪಡುವನು. ಶಾಲ್ಮಲಿಯೆಂಬ ಮತ್ತೊಂದು ನರಕವಿರುವುದು. ಅದರಲ್ಲಿ ಅತಿಗಟ್ಟಿಯಾದ ಕಾದು ಸುಡುತ್ತಿರುವ ಮೊಳೆಗಳಿರುವುವು. ಆ ಶಾಲ್ಮಲಿಯನ್ನು

ತಯಾಲಿಂಗತಿ ದುಃಖಾರ್ತಾ ನಾರೀ ಬಹುನರಂಗಮಾ ।
ಯೇ ವದಂತಿ ಸದಾಸತ್ಯಂ ಪರಮರ್ಮಾವಕರ್ತನಂ ॥ ೯೬ ॥

ಜಿಹ್ವಾ ಚತೋಚ್ಛಿದ್ಯತೇ ತೇಷಾಂ ಸದಸ್ತ್ಯೈರ್ಯಮಕಿಂಕರೈಃ ।
ಯೇ ತು ರಾಗೈಃ ಕಟಾಕ್ಷೈಶ್ಚ ವೀಕ್ಷಂತೇ ಪರಯೋಷಿತಂ ॥ ೯೭ ॥

ತೇಷಾಂ ಚಕ್ಷೂಂಷಿ ನಾರಾಚೈರ್ವಿಧ್ಯಂತೇ ಯಮಕಿಂಕರೈಃ ।
ಮಾತರಂ ಯೇಽಪಿ ಗಚ್ಛಂತಿ ಭಗಿನೀಂ ದುಹಿತರಂ ಸ್ನುಷಾಂ ॥ ೯೮ ॥

ಸ್ತ್ರೀಬಾಲವೃದ್ಧಹಂತಾರೋ ಯಾವದಿಂದ್ರಾಶ್ಚತುರ್ದಶ ।
ಜ್ವಾಲಾಮಾಲಾಕುಲಂ ರೌದ್ರಂ ಮಹಾರೌರವಸಂಜ್ಞಿತಂ ॥ ೯೯ ॥

---

೯೬. ಅನೇಕ ಪುರುಷರ ಸಮಾಗಮನವನ್ನು ಮಾಡಿದ ಸ್ತ್ರೀಯು ಅಪ್ಪಿಕೊಂಡು ದುಃಖವನ್ನು ಅನುಭವಿಸುವಳು. ಯಾವ ಮಾನವರು ಸರ್ವದಾ ಮತ್ತೊಬ್ಬರ ಮರ್ಮೋದ್ಘಾಟನೆಯಲ್ಲಿಯೇ ತೊಡಗಿರುತ್ತಾ ಅಸತ್ಯವನ್ನು ನುಡಿಯುವರೋ–

೯೭. ಅಂಥವರ ನಾಲಗೆಯನ್ನು ಯಮಕಿಂಕರರು ಸೀಳಿಹಾಕುವರು. ಯಾರು, ಪರಸ್ತ್ರೀಯರನ್ನು ಕೆಟ್ಟ ಅಭಿಲಾಷೆಯಿಂದಲೂ ಕಟಾಕ್ಷಗಳಿಂದಲೋ ವೀಕ್ಷಿಸುವರೋ–

೯೮. ಅಂಥವರ ಕಣ್ಣುಗಳನ್ನು ಯಮಕಿಂಕರರು ಬಾಣಗಳಿಂದ ಚುಚ್ಚಿಹಾಕುವರು. ಯಾರು ತಾಯಿಯನ್ನಾಗಲಿ, ಅಕ್ಕತಂಗಿಯರನ್ನಾಗಲಿ, ಮಗಳನ್ನಾಗಲಿ, ಸೊಸೆಯನ್ನಾಗಲಿ, ಬೆರೆಯುವರೋ

೯೯. ಯಾರು ಸ್ತ್ರೀಯರನ್ನೂ, ಮಕ್ಕಳನ್ನೂ, ಮುದುಕರನ್ನೂ, ಕೊಲ್ಲುವರೋ ಅಂಥವರು ಹದಿನಾಲ್ಕು ಇಂದ್ರಪಟ್ಟಗಳ ಕಳೆಯುವವರೆಗೆ ಸಾಲು ಸಾಲಾಗಿ ಜ್ವಾಲೆಗಳನ್ನು ಕಕ್ಕುತ್ತಾ ಅತಿಭಯಕರವೆನಿಸಿದ ಮಹಾರೌರವವೆಂಬ ಹೆಸರಿನ

ನರಕಂ ಯೋಜನಾನಾಂ ಚ ಸಹಸ್ರಾಣಿ ಚತುರ್ದಶ ।
ಪುರಂ ಕ್ಷೇತ್ರಂ ಗೃಹಂ ಗ್ರಾಮಂ ಯೋ ದೀಪಯತಿ ವಹ್ನಿನಾ ॥ ೧೦೦ ॥

ಸ ತತ್ರ ದಹ್ಯತೇ ಮೂಢೋ ಯಾವತ್ಕಲ್ಪಸ್ಥಿತಿರ್ನರಃ ।
ತಾಮಿಸ್ರಮಿತಿ ವಿಖ್ಯಾತಂ ಲಕ್ಷಯೋಜನವಿಸ್ತೃತಂ ॥ ೧೦೧ ॥

ನಿಪತದ್ಭಿಃ ಸದಾ ರೌದ್ರೈಃ ಖಡ್ಗಪಟ್ಟಿಶಮುದ್ಗರೈಃ ।
ತತ್ರ ಚೌರಾ ನರಾಃ ಕ್ಷಿಪ್ತಾಸ್ತಾಡ್ಯಂತೇ ಯಮಕಿಂಕರೈಃ ॥ ೧೦೨ ॥

ಶೂಲಶಕ್ತಿಗದಾಖಡ್ಗೈರ್ಯಾವತ್ಕಲ್ಪಶತತ್ರಯಂ ।
ತಾಮಿಸ್ರಾದ್ದ್ವಿಗುಣಂ ಪ್ರೋಕ್ತಂ ಮಹಾತಾಮಿಸ್ರಸಂಜ್ಞಿತಂ ॥ ೧೦೩ ॥

---

೧೦೦. ನರಕವನ್ನು ಹೊಂದುವರು. ಅದು ಹದಿನಾಲ್ಕುಸಾವಿರ ಯೋಜನಗಳಷ್ಟು ವಿಶಾಲವಾಗಿರುವುದು. ಯಾರು ಊರುಗಳಿಗೂ, ಹೊಲ ಗದ್ದೆಗಳಿಗೂ, ಮನೆಗಳಿಗೂ, ಹಳ್ಳಿಪಳ್ಳಿಗಳಿಗೂ ಬೆಂಕಿಯನ್ನು ಹಚ್ಚುವರೋ,

೧೦೧. ಆ ಮೂಢಮಾನವರನ್ನು ಮಹಾರೌರವದಲ್ಲಿ ಹಾಕಿ ಪ್ರಳಯ ಕಾಲದವರೆಗೂ ಸುಡುವರು. ತಾಮಿಸ್ರವೆಂಬ ಪ್ರಸಿದ್ಧವಾದ ಇನ್ನೊಂದು ನರಕವು ಒಂದುಲಕ್ಷಯೋಜನಗಳಷ್ಟು ವಿಶಾಲವಾಗಿರುವುದು.

೧೦೨. ಅಲ್ಲಿ ಮೇಲಿನಿಂದ ಖಡ್ಗಗಳೂ ಪಟ್ಟಸಗಳೂ, ಮುದ್ಗರಗಳೂ ಬಂದು ಬೀಳುತ್ತಿರುವುವು. ಅಲ್ಲಿ ಯಾರು ಕಳ್ಳಕಾಕರರಾಗಿದ್ದರೋ ಅಂಥವ ರನ್ನೆಸೆದು ಆ ಯಮದೂತರು

೧೦೩. ಶೂಲಗಳಿಂದಲೂ, ಶಕ್ತಿಗಳಿಂದಲೂ, ಖಡ್ಗಗಳಿಂದಲೂ, ಮುನ್ನೂರು ಪ್ರಳಯಗಳು ಮರಳುವವರೆಗೆ ಹೊಡೆಯುತ್ತಾ ಹಿಂಸಿಸುವರು. ಮಹಾತಾಮಿಸ್ರವೆಂಬ ನರಕವು ಈ ತಾಮಿಸ್ರಕ್ಕೆ ಎರಡರಷ್ಟು ಯಾತನಾ ಮಯವಾದುದು.

ಜಲೌಕಾಸರ್ಪಸಂಪೂರ್ಣಾಂ ನಿರಾಲೋಕಂ ಸುದುಃಖದಂ ।
ಮಾತೃಹಾ ಪಿತೃಹಾ ಚೈವ ಮಿತ್ರವಿಸ್ರಂಭಘಾತಕಃ ॥ ೧೦೪ ॥

ತಿಷ್ಠಂತಿ ತಕ್ಷ್ಯಮಾಣಾಶ್ಚ ಯಾವತ್ತಿಷ್ಠತಿ ಮೇದಿನೀ ।
ಅಸಿಪತ್ರವನಂ ನಾಮ ನರಕಂ ಭೂರಿದುಃಖದಂ ॥ ೧೦೫ ॥

ಯೋಜನಾಯುತವಿಸ್ತಾರಂ ಜ್ವಲತ್ಖಡ್ಗೈಃ ಸಮಾಕುಲಂ ।
ಪಾತಿತಸ್ತತ್ರ ತೈಃ ಖಡ್ಗೈಃ ಶತಧಾ ತು ಸಮಾಹತಃ ॥ ೧೦೬ ॥

ಮಿತ್ರಘ್ನಃ ಕೃತ್ಯತೇ ತಾವದ್ಯಾವದಾಭೂತಸಂಪ್ಲವಂ ।
ಕರಂಭವಾಲುಕಾ ನಾಮ ನರಕಂ ಯೋಜನಾಯುತಂ ॥ ೧೦೭ ॥

ಕೂಪಾಕಾರಂ ವೃತಂ ದೀಪ್ತೈರ್ವಾಲುಕಾಂಗಾರಕಂಟಕೈಃ ।
ದಹ್ಯತೇ ಭಿದ್ಯತೇ ವರ್ಷಲಕ್ಷಾಯುತಶತತ್ರಯಂ ॥ ೧೦೮ ॥

---

೧೦೪. ಅಲ್ಲಿ ಬೆಳಕೆಂಬುದೇ ಇಲ್ಲ. ಜಿಗಣೆಗಳೂ, ಹಾವುಗಳೂ ಅಲ್ಲಿ ತುಂಬಿರುವುವು. ಆ ನರಕದಲ್ಲಿ ಮಾತಾಪಿತೃಗಳನ್ನು ಕೊಂದವನೂ, ನಂಬಿದ ಸ್ನೇಹಿತನನ್ನು ಕೊಂದವನೂ ಆದ ಪಾಪಿಯು ಈ ಭೂಮಿಯಲ್ಲಿರುವ ಪರ್ಯಂತವೂ ಕೊಯ್ಯಿಸಿಕೊಳ್ಳಲ್ಪಡುತ್ತಾ ಇರುವನು.

೧೦೫-೧೦೬. ಅಸಿಪತ್ರವನವೆಂಬ ನರಕವು ಬಹುದುಃಖಕರವಾದುದು. ಅದು ಹತ್ತುಸಾವಿರ ಯೋಜನಗಳಷ್ಟು ಅಗಲವಾಗಿರುವುದು. ಅಲ್ಲಿ ಕಾಡುಉರಿ ಯನ್ನುಗುಳುತ್ತಿರುವ ಕತ್ತಿಗಳು ಅಲುಗಾಡುತ್ತಿರುವುವು. ಅಲ್ಲಿ ಬಿದ್ದವನು ಆ ಕತ್ತಿಗಳಿಗೆ ಸಿಲುಕಿ ನೂರಾರು ಹೋಳುಗಳಾಗಿ ಸೀಳಲ್ಪಡುವನು.

೧೦೭. ಅಲ್ಲಿ ಮಿತ್ರನನ್ನು ಕೊಂದ ಪಾಪಿಯು, ಈ ಪ್ರಪಂಚದಲ್ಲಿರುವ ಪ್ರಾಣಿಗಳೆಲ್ಲಾ ಸಾಯುವವರೆಗೆ (ಪ್ರಳಯ) ಕತ್ತರಿಸಲ್ಪಡುತ್ತಿರುವನು. ಕರಂಭ ವಾಲುಕಾ ಎಂಬ ನರಕವು ಹತ್ತುಸಾವಿರ ಯೋಜನಗಳಷ್ಟು ವಿಸ್ತಾರ ವಾಗಿರುವುದು.

೧೦೮. ಅದು ಒಂದು ಅಗಲವಾದ ಬಾಯಿಯಂತಿದ್ದು, ಮರಳಿನಂತಿ ರುವ ಬೆಂಕಿಯ ಕಣಗಳಿಂದಲೂ, ಉರಿಯುತ್ತಿರುವ ಮುಳ್ಳುಗಳಿಂದಲೂ ತುಂಬಿ ರುವುದು. ಅಲ್ಲಿ ಬಿದ್ದವನು ಒಂದುಲಕ್ಷಹತ್ತುಸಾವಿರದ ಮುನ್ನೂರುವರ್ಷಗಳ ಕಾಲ ಬೇಯುವನು ಮತ್ತು ಸೀಳಲ್ಪಡುವನು.

ಯೇನ ದಗ್ಧೋ ಜನೋ ನಿತ್ಯಂ ಮಿಥ್ಯೋಪಾಯೈಃ ಸುದಾರುಣೈಃ ।
ಕಾಕೋಲಂ ನಾಮ ನರಕಂ ಕೃಮಿಪೂಯಪರಿಪ್ಲುತಂ ॥ ೧೦೯ ॥

ಕ್ಷಿಪ್ಯತೇ ತತ್ರ ದುಷ್ಟಾತ್ಮಾ ಏಕಾಕೀ ಮಿಷ್ಟಭುಙ್ನರಃ ।
ಕುಡ್ಮಲಂ ನಾಮ ನರಕಂ ಪೂರ್ಣಂ ವಿಣ್ಮೂತ್ರಶೋಣಿತೈಃ ॥ ೧೧೦ ॥

ಪಂಚಯಜ್ಞಕ್ರಿಯಾಹೀನಾಃ ಕ್ಷಿಪ್ಯಂತೇ ತತ್ರ ವೈ ನರಾಃ ।
ಸುದುರ್ಗಂಧಂ ಮಹಾಭೀಮಂ ಮಾಂಸಶೋಣಿತಸಂಕುಲಂ ॥ ೧೧೧ ॥

ಅಭಕ್ಷ್ಯಾನ್ನೇ ರತಾಸ್ತೇsತ್ರ ನಿಪತಂತಿ ನರಾಧಮಾಃ ।
ಕ್ರಿಮಿಕೀಟಸಮಾಕೀರ್ಣಂ ಶವಪೂರ್ಣಂ ಮಹಾವಟಂ ॥ ೧೧೨ ॥

---

೧೦೯. ಯಾವನು ಇಲ್ಲದ ಸಲ್ಲದ ಸುಳ್ಳುಪಾಯಗಳಿಂದ ಪ್ರತಿನಿತ್ಯವೂ ಜನರನ್ನು ಸುಡುತ್ತಿದ್ದನೋ ಆ ಪಾಪಿಯನ್ನು ಅಲ್ಲಿ ಹಾಕುವರು. ಕಾಕೋಲವೆಂಬ ಇನ್ನೊಂದು ನರಕವಿರುವುದು. ಅದು ಕೃಮಿಯಿಂದಲೂ ಕೀವಿನಿಂದಲೂ ತುಂಬಿರುವುದು.

೧೧೦. ಯಾವ ಪುರುಷನು ಮತ್ತೊಬ್ಬನಿಗೆ ಇಕ್ಕದೆ ತಾನೊಬ್ಬನೇ ಮೃಷ್ಟಾನ್ನವನ್ನು ಭುಜಿಸುವನೋ ಆ ಪಾಪಿಯು ಆಕಾಕೋಲದಲ್ಲಿ ಎಸೆಯಲ್ಪಡುವನು. ಕುಟ್ಮಲವೆಂಬ ನರಕವು ಮಲದಿಂದಲೂ ಮೂತ್ರದಿಂದಲೂ ರಕ್ತದಿಂದಲೂ ಪೂರ್ಣವಾಗಿರುವುದು.

೧೧೧. ಅಲ್ಲಿ ಪಂಚಯಜ್ಞಗಳನ್ನು (ದೇವ, ಪಿತೃ, ಅತಿಥಿ, ಭೂತ ಮನುಷ್ಯ ಯಜ್ಞಗಳು) ಮಾಡದ ಮನುಷ್ಯರನ್ನು ನೂಕುವರು. ಆ ನರಕವು ದುರ್ವಾಸನೆಯನ್ನು ಬೀರುತ್ತಾ ಮಾಂಸ ರಕ್ತಗಳಿಂದ ತುಂಬಿ ನಾರುತ್ತಿರುವುದು.

೧೧೨. ಇದರಲ್ಲಿ ಅಭಕ್ಷ್ಯಭಕ್ಷಣನಿರತರಾದ ನರಾಧಮರೂ ಬೀಳುವರು. ಮತ್ತೊಂದು ಮಹಾವಟವೆಂಬ ನರಕವಿರುವುದು. ಆ ಹಳ್ಳದಲ್ಲಿ ಕೃಮಿಕೀಟಗಳೂ ಹೆಣಗಳೂ ತುಂಬಿಕೊಂಡಿರುವುವು.

ಅಧೋಮುಖಃ ಪತೇತ್ತತ್ರ ಕನ್ಯಾವಿಕ್ರಯಕೃನ್ನರಃ ।
ನಾಮ್ನಾ ವೈ ತಿಲಪಾಕೇತಿ ನರಕಂ ದಾರುಣಂ ಸ್ಮೃತಂ ॥ ೧೧೩ ॥

ತಿಲವತ್ತತ್ರ ಪೀಡ್ಯಂತೇ ಪರಪೀಡಾರತಾಶ್ಚ ಯೇ ।
ನರಕಂ ತೈಲಪಾಕೇತಿ ಜ್ವಲತ್ತೈಲಮಹೀಪ್ಲವಂ ॥ ೧೧೪ ॥

ಪಚ್ಯತೇ ತತ್ರ ಮಿತ್ರಘ್ನೋ ಹಂತಾ ಚ ಶರಣಾಗತಂ ।
ನಾಮ್ನಾ ವಜ್ರಕಪಾಟೇತಿ ವಜ್ರಶೃಂಖಲಯಾನ್ವಿತಂ ॥ ೧೧೫ ॥

ಪೀಡ್ಯಂತೇ ನಿರ್ದಯಂ ತತ್ರ ಯೈಃ ಕೃತಃ ಕ್ಷೀರವಿಕ್ರಯಃ ।
ನಿರುಚ್ಛ್ವಾಸ ಇತಿ ಪ್ರೋಕ್ತಂ ತಮೋಽಂಧಂ ವಾತವರ್ಜಿತಂ ॥ ೧೧೬ ॥

ನಿಶ್ಚೇಷ್ಟಂ ಕ್ಷಿಪ್ಯತೇ ತತ್ರ ವಿಪ್ರದಾನನಿರೋಧಕೃತ್ ।
ಅಂಗಾರೋಪಚಯಂ ನಾಮ ದೀಪ್ತಾಂಗಾರಸಮುಜ್ಜ್ವಲಂ ॥ ೧೧೭ ॥

---

೧೧೩. ಅದರಲ್ಲಿ ಕನ್ಯಾವಿಕ್ರಯಮಾಡಿದ ಪಾಪಿಯು ಕೆಳಮುಖನಾಗಿ ಬೀಳುವನು. ತಿಲಪಾಕವೆಂಬ ಇನ್ನೊಂದು ನರಕವು ಬಹು ಘೋರವಾದುದು.

೧೧೪. ಅದರಲ್ಲಿ ಪರಪೀಡನೆಯಲ್ಲೇ ನಿರತರಾದ ಪಾಪಿಗಳು ಗಾಣಕ್ಕೆ ಕೊಟ್ಟ ಎಳ್ಳಿನಂತೆ ಪೀಡಿಸಲ್ಪಡುವರು ತೈಲಪಾಕವೆಂಬ ನರಕವು ಕುದಿಯುತ್ತಿರುವ ಎಣ್ಣೆಯಿಂದ ತುಂಬಿರುವುದು.

೧೧೫. ಮಿತ್ರನನ್ನು ಕೊಂದವನೂ ಮರೆಹೊಕ್ಕವನನ್ನು ಕೊಂದವನೂ ಈ ತೈಲಪಾಕದಲ್ಲಿ ಬಿದ್ದು ನರಳುವನು. ವಜ್ರಕಪಾಟವೆಂಬ ನರಕವು ವಜ್ರದ ಸರಪಳಿಗಳಿಂದ ಕೂಡಿರುವುದು.

೧೧೬. ಯಾರು ಹಾಲನ್ನು ಮಾರುವರೋ ಅವರನ್ನು ಇಲ್ಲಿ ನಿರ್ದಯವಾಗಿ ಪೀಡಿಸುವರು. ನಿರುಚ್ಛ್ವಾಸವೆಂಬ ನರಕವು ಕಗ್ಗತ್ತಲೆಯಿಂದ ತುಂಬಿ ಗಾಳಿಯ ಹೆಸರೇ ಇಲ್ಲದಿರುವುದು.

೧೧೭. ಯಾರು ಬ್ರಾಹ್ಮಣರಿಗೆ ಕೊಡುತ್ತಿದ್ದ ದಾನವನ್ನು ಬೇಡವೆಂದು ತಡೆಯುವರೋ ಅವರು ಅಲುಗಾಡದ ಹಾಗೆ ಕೆಡಹಲ್ಪಡುವರು. ಇದೂ ಅಲ್ಲದೆ ಅಂಗಾರೋಪಚಯವೆಂಬ ಕೆಂಪಗೆ ಕಾದ ಕೆಂಡಗಳಿಂದ ತುಂಬಿರುವ ನರಕವಿನ್ನೊಂದಿರುವುದು

ದಹ್ಯತೇ ತತ್ರ ಯೇನೋಕ್ತಂ ದಾನಂ ವಿಪ್ರಾಯ ನಾರ್ಪಿತಂ ।
ಮಹಾಪಾಯೀತಿ ನರಕಂ ಲಕ್ಷಯೋಜನಮಾಯತಂ ॥ ೧೧೮ ॥

ಪಾತ್ಯಂತೇಽಧೋಮುಖಾಸ್ತತ್ರ ಯೇ ಜಲ್ಪಂತಿ ಸದಾನೃತಂ ।
ಮಹಾಜ್ವಾಲೇತಿ ನರಕಂ ಜ್ವಾಲಾಭಾಸ್ವರಭೀಷಣಂ ॥ ೧೧೯ ॥

ದಹ್ಯತೇ ತತ್ರ ಸುಚಿರಂ ಯಃ ಪಾಪೇ ಬುದ್ಧಿಕೃನ್ನರಃ ।
ನರಕಂ ಕ್ರಕಚಾಖ್ಯಾತಂ ಪೀಡ್ಯಂತೇ ತತ್ರ ವೈ ನರಾಃ ॥ ೧೨೦ ॥

ಕ್ರಕಚೈರ್ವಜ್ರಧಾರೋಗ್ರೈರಗಮ್ಯಾಗಮನೇ ರತಾಃ ।
ನರಕಂ ಗುಡಪಾಕೇತಿ ಜ್ವಲದ್ಗುಡಪ್ರದೈರ್ವೃತಂ ॥ ೧೨೧ ॥

---

೧೧೮. ಯಾವನು ಬ್ರಾಹ್ಮಣನಿಗೆ ಕೊಡುತ್ತೇನೆ ಎಂಬುದಾಗಿ ಮಾತು ಕೊಟ್ಟು ಬಳಿಕ ವಚನಭ್ರಷ್ಟನಾಗಿ ದಾನಮಾಡುವುದಿಲ್ಲವೋ ಅವನು ಆ ನರಕದಲ್ಲಿ ದಂಡಿತನಾಗುವನು. ಮಹಾಪಾಯಿ ಎಂಬ ನರಕವು ಲಕ್ಷಯೋಜನಗಳಷ್ಟು ಉದ್ದವಾಗಿರುವುದು.

೧೧೯. ಯಾರು ಸರ್ವದಾ ಸುಳ್ಳನ್ನೇ ಹೇಳುವರೋ ಅವರನ್ನು ಇಲ್ಲಿ ಕೆಳಮುಖನಾಗಿ ನೂಕುವರು. ಮಹಾಜ್ವಾಲವೆಂಬ ನರಕವು ಜ್ವಾಲೆಗಳಿಂದ ತುಂಬಿ ಭಯಂಕರವಾಗಿರುವುದು.

೧೨೦–೧೨೧. ಯಾರು ಪಾಪಕಾರ್ಯಗಳನ್ನು ಬುದ್ಧಿಪೂರ್ವಕವಾಗಿ ಮಾಡುವರೋ ಅವರನ್ನು ಬಹುಕಾಲ ಈ ನರಕದಲ್ಲಿ ಪೀಡಿಸುವರು. ಕ್ರಕಚವೆಂಬ ಪ್ರಖ್ಯಾತವಾದ ನರಕದಲ್ಲಿ ವಜ್ರದಂತೆ ತೀಕ್ಷ್ಣವಾದ (ಮೊನಚಾದ) ಅಲಗುಗಳುಳ್ಳ ಗರಗಸಗಳಿಂದ ಅಗಮ್ಯಾಗಮನದಲ್ಲಿ ಆಸಕ್ತರಾದ ಪಾಪಿಗಳನ್ನು ಕೊಯ್ಯುವರು. ಗುಡಪಾಕವೆಂಬ ನರಕವು ಕುದಿಯುತ್ತಿರುವ ಬೆಲ್ಲದ ಪಾಕದಿಂದ ಕೂಡಿದ ಮಡುಗಳುಳ್ಳದು.

ನಿಕ್ಷಿಪ್ತೋ ದಹ್ಯತೇ ತಸ್ಮಿನ್ವರ್ಣಸಂಕರಕೃನ್ನರಃ ।
ಕ್ಷುರಧಾರೇತಿ ನರಕಂ ತೀಕ್ಷ್ಣಕ್ಷುರಸಮಾವೃತಂ ॥ ೧೨೨ ॥

ಛಿದ್ಯಂತೇ ತತ್ರ ಕಲ್ಪಾಂತಂ ವಿಪ್ರಭೂಮಿಹರಾ ನರಾಃ ।
ನರಕಂ ಚಾಂಬರೀಷಾಖ್ಯಂ ಪ್ರಲಯಾನಲದೀಪಿತಂ ॥ ೧೨೩ ॥

ಕಲ್ಪಕೋಟಿಶತಂ ತತ್ರ ದಹ್ಯತೇ ಸ್ವರ್ಣಹಾರಕಃ ।
ನಾಮ್ನಾ ವಜ್ರಕುಠಾರೇತಿ ನರಕಂ ವಜ್ರಸಂಕುಲಂ ॥ ೧೨೪ ॥

ಛಿದ್ಯಂತೇ ತತ್ರ ಛೇತ್ತಾರೋ ದ್ರುಮಾಣಾಂ ಪಾಪಕಾರಿಣಃ ।
ನರಕಂ ಪರಿತಾಪಾಖ್ಯಂ ಪ್ರಲಯಾನಲದೀಪಿತಂ ॥ ೧೨೫ ॥

ಗರದೋ ಮಧುಹರ್ತಾ ಚ ಪಚ್ಯತೇ ತತ್ರ ಪಾಪಕೃತ್ ।
ನರಕಂ ಕಾಲಸೂತ್ರಂ ಚ ವಜ್ರಸೂತ್ರವಿನಿರ್ಮಿತಂ ॥ ೧೨೬ ॥

---

೧೨೨-೧೨೩. ಅದರಲ್ಲಿ ವರ್ಣಸಾಂಕರ್ಯಮಾಡಿದ ಪಾಪಿಯು ಬಿದ್ದು ಹಿಂಸೆಯನ್ನು ಅನುಭವಿಸುವನು. ಕ್ಷುರಧಾರವೆಂಬ ನರಕದಲ್ಲಿ ಚೂಪಾದ ಅಲಗುಗಳುಳ್ಳ ಕತ್ತಿಗಳು ತುಂಬಿರುವುವು. ಅದರಲ್ಲಿ ಬ್ರಾಹ್ಮಣರ ಭೂಮಿಯನ್ನು ಅನ್ಯಾಯರೀತಿಯಿಂದ ಕಿತ್ತುಕೊಂಡವರು ಈ ಕಲ್ಪವು ಮುಗಿಯುವ ವರೆಗೂ ಬಿದ್ದಿರುವರು. ಅಂಬರೀಷವೆಂಬ ನರಕವು ಪ್ರಳಯಾಗ್ನಿಯಿಂದ ಕಾಯುತ್ತಿರುವುದು.

೧೨೪. ಅದರಲ್ಲಿ ಚಿನ್ನವನ್ನು ಕದ್ದ ಪಾಪಿಯು ನೂರುಕೋಟಿ ಕಲ್ಪಗಳ ವರೆಗೆ ಬೇಯುವನು. ವಜ್ರಕುಠಾರವೆಂದು ಪ್ರಸಿದ್ಧವಾದ ನರಕವು ವಜ್ರಗಳಿಂದ ತುಂಬಿರುವುದು.

೧೨೫. ಯಾರು ಮರಗಳನ್ನು ಕತ್ತರಿಸುವರೋ ಅವರು ಅದರಲ್ಲಿ ಬಿದ್ದು ಚೂರುಚೂರಾಗಿ ಕತ್ತರಿಸಲ್ಪಡುವರು. ಪರಿತಾಪವೆಂಬ ಮತ್ತೊಂದು ನರಕವಿರುವುದು. ಅದು ಯಾವಾಗಲೂ ಪ್ರಳಯಕಾಲದ ಬೆಂಕಿಯಂತೆ ಉರಿಯುತ್ತಿರುವುದು.

೧೨೬. ಅದರಲ್ಲಿ, ವಿಷವನ್ನು ಕೊಟ್ಟವನೂ, ಮದ್ಯವನ್ನು ಕದ್ದವನೂ, ಆದ ಪಾಪಿಯು ಬೇಯುವನು. ಕಾಲಸೂತ್ರವೆಂಬ ಇನ್ನೊಂದು ನರಕವು ವಜ್ರಮಯವಾದ ದಾರದಿಂದ ಕಟ್ಟಲ್ಪಟ್ಟಿರುವುದು.

ಭ್ರಮಂತಸ್ತತ್ರ ಛಿದ್ಯಂತೇ ಪರಸಸ್ಯೋಪಲುಂಪಕಾಃ ।
ನರಕಂ ಕಶ್ಮಲಂ ನಾಮ ಶ್ಲೇಷ್ಮಶಿಂಘಾಣಕಾವೃತಂ ॥ ೧೨೭ ॥

ತತ್ರ ಸಂಕ್ಷಿಪ್ಯತೇ ಕಲ್ಪಂ ಸದಾ ಮಾಂಸರುಚಿರ್ನರಃ ।
ನರಕಂ ಚೋಗ್ರಗಂಧೇತಿ ಲಾಲಾಮೂತ್ರಪುರೀಷವತ್ ॥ ೧೨೮ ॥

ಕ್ಷಿಪ್ಯಂತೇ ತತ್ರ ನರಕೇ ಪಿತೃಪಿಂಡಾಪ್ರಯಚ್ಛಕಾಃ ।
ನರಕಂ ದುರ್ಧರಂ ನಾಮ ಜಲೌಕಾವೃಶ್ಚಿಕಾಕುಲಂ ॥ ೧೨೯ ॥

ಉತ್ಕೋಚಭಕ್ಷಕಸ್ತತ್ರ ತಿಷ್ಠತೇ ವರ್ಷಕಾಯುತಂ ।
ಯಚ್ಚ ವಜ್ರಮಹಾಪೀಡಾ ನರಕಂ ವಜ್ರನಿರ್ಮಿತಂ ॥ ೧೩೦ ॥

---

೧೨೭. ಯಾರು ಮತ್ತೊಬ್ಬರು ಬೆಳೆದ ಪಯಿರನ್ನು ಕೊಯ್ದುಕೊಂಡು ಓಡುವರೋ ಅವರು ಅಲ್ಲಿ ಸುತ್ತುತ್ತಾ ಆ ವಜ್ರಸೂತ್ರಕ್ಕೆ ಸಿಕ್ಕಿ ಚಿನ್ನಭಿನ್ನವಾಗುವರು. ಕಶ್ಮಲವೆಂಬ ನರಕವು ಶ್ಲೇಷ್ಮದಿಂದಲೂ ಸಿಂಬಳದಿಂದಲೂ ತುಂಬಿರುವುದು.

೧೨೮. ಯಾವ ನರನು ಸರ್ವದಾ ಮಾಂಸವನ್ನೇ ಭಕ್ಷಿಸುತ್ತಿರುವನೋ ಅವನು ಕಲ್ಪಮುಗಿಯುವವರೆಗೂ ಅದರಲ್ಲಿ ಒದ್ದಾಡುತ್ತಿರುವನು. ಮತ್ತು ಉಗ್ರಗಂಧವೆಂಬ ಮತ್ತೊಂದು ನರಕವು ಜೊಲ್ಲು ಮತ್ತು ಮಲ ಮೂತ್ರಗಳಿಂದ ಸರ್ವದಾ ತುಂಬಿರುವುದು.

೧೨೯. ಯಾರು ಪಿತೃಗಳಿಗೆ ಶ್ರಾದ್ಧಾದಿಗಳನ್ನು ಮಾಡಿ ಪಿಂಡವನ್ನು ಕೊಡುವುದಿಲ್ಲವೋ ಅವರು ಈ ನರಕದಲ್ಲಿ ಬೀಳುವರು. ದುರ್ಧರವೆಂಬ ನರಕವು ಜಿಗಣೆಗಳಿಂದಲೂ ಚೇಳುಗಳಿಂದಲೂ ಜಿಗಿಜಿಗಿಸುತ್ತಿರುವುದು.

೧೩೦. ಲಂಚವನ್ನು ತಿನ್ನುವ ಪಾಪಿಯು ಅದರಲ್ಲಿ ಹತ್ತುಸಾವಿರ ವರ್ಷಗಳು ಬಿದ್ದು ಒದ್ದಾಡುವನು. ವಜ್ರಮಹಾಪೀಡವೆಂಬ ವಜ್ರನಿರ್ಮಿತವಾದ ನರಕವೊಂದಿರುವುದು.

ತತ್ರ ಪ್ರಕ್ಷಿಪ್ಯ ದಹ್ಯಂತೇ ಪೀಡ್ಯಂತೇ ಯಮಕಿಂಕರೈಃ ।
ಧನಂ ಧಾನ್ಯಂ ಹಿರಣ್ಯಂ ವಾ ಪರಕೀಯಂ ಹರಂತಿ ಯೇ ॥ ೧೩೧ ॥

ಯಮದೂತೈಶ್ಚ ಚೌರಾಸ್ತೇ ಛಿದ್ಯಂತೇ ಲವಶಃ ಕ್ಷುರೈಃ ।
ಯೇ ಹತ್ವಾ ಪ್ರಾಣಿನಂ ಮೂಢಾಃ ಖಾದಂತೇ ಕಾಕಗೃಧ್ರವತ್ ॥ ೧೩೨ ॥

ಭೋಜ್ಯಂತೇ ಚ ಸ್ವಮಾಂಸಂ ತೇ ಕಲ್ಪಾಂತಂ ಯಮಕಿಂಕರೈಃ ।
ಆಸನಂ ಶಯನಂ ವಸ್ತ್ರಂ ಪರಕೀಯಂ ಹರಂತಿ ಯೇ ॥ ೧೩೩ ॥

ಯಮದೂತೈಶ್ಚ ತೇ ಮೂಢಾ ಭಿದ್ಯಂತೇ ಶಕ್ತಿತೋಮರೈಃ ।
ಫಲಂ ಪತ್ರಂ ನೃಣಾಂ ವಾಪಿ ಹೃತಂ ಯೈಸ್ತು ಕುಬುದ್ಧಿಭಿಃ ॥ ೧೩೪ ॥

ಯಮದೂತೈಶ್ಚ ತೇ ಕ್ರುದ್ಧೈರ್ದಹ್ಯಂತೇ ತೃಣವಹ್ನಿಭಿಃ ।
ಪರದ್ರವ್ಯೇ ಕಲತ್ರೇ ಚ ಯಃ ಸದಾ ದುಷ್ಟಧೀರ್ನರಃ ॥ ೧೩೫ ॥

---

೧೩೧. ಯಾರು ಪರಕೀಯವಾದ ದ್ರವ್ಯವನ್ನೂ, ಧಾನ್ಯವನ್ನೂ, ಚಿನ್ನವನ್ನೂ ಅಪಹರಿಸುವರೋ ಅವರನ್ನು ನೂಕಿ ಸುಟ್ಟು ಹಿಂಸಿಸುವರು.

೧೩೨. ಮತ್ತು ಆ ಕಳ್ಳರನ್ನು ಯಮದೂತರು ಕ್ಷುರಗಳಿಂದ (ಕ್ಷೌರದ ಕತ್ತಿ) ಚೂರುಚೂರಾಗಿ ಕತ್ತರಿಸುವರು. ಯಾರು ಪ್ರಾಣಿಗಳನ್ನು ಕೊಂದು ಕಾಗೆ ಹದ್ದುಗಳಂತೆ ತಿನ್ನುತ್ತಾರೆಯೋ–

೧೩೩. ಅವರಿಗೆ ಯಮದೂತರು ಕಲ್ಪವು ಮುಗಿಯುವವರೆಗೆ ಅವರವರ ದೇಹವನ್ನೇ ಕತ್ತರಿಸಿ ಆ ಮಾಂಸವನ್ನೇ ತಿನ್ನಿಸುವರು. ಯಾರು, ಇನ್ನೊಬ್ಬರು ಕುಳಿತುಕೊಳ್ಳುವ ಆಸನವನ್ನೂ, ಹಾಸಿಗೆಯನ್ನೂ, ವಸ್ತ್ರವನ್ನೂ ಕದಿಯುವರೋ–

೧೩೪. ಅವರನ್ನು ಯಮದೂತರು ಶಕ್ತಿಗಳಿಂದಲೂ ತೋಮರಗಳಿಂದಲೂ ಇರಿಯುವರು. ಯಾವ ಕೆಟ್ಟಮನುಷ್ಯರು ಇತರರ ಫಲಪತ್ರಗಳನ್ನು ಅಪಹರಿಸುವರೋ–

೧೩೫. ಅಂಥವರನ್ನು ಯಮಭಟರು ಮೈಗೆ ಹುಲ್ಲುಸುತ್ತಿ ಬೆಂಕಿಹಚ್ಚಿ ಸುಡುವರು. ಯಾವ ದುರ್ಬುದ್ಧಿಯು ಪರಸ್ತ್ರೀಯಲ್ಲಿಯೂ, ಪರದ್ರವ್ಯದಲ್ಲೂ ದುರಾಸೆ ತೋರುವನೋ–

ಯಮದೂತೈರ್ಜ್ವಲತ್ತಸ್ಯ ಹೃದಿ ಶೂಲಂ ನಿಖನ್ಯತೇ ।
ಕರ್ಮಣಾ ಮನಸಾ ವಾಚಾ ಯೇ ಧರ್ಮವಿಮುಖಾ ನರಾಃ ॥ ೧೩೬ ॥

ಯಮಲೋಕೇ ತು ತೇ ಘೋರಾ ಲಭಂತೇ ಪರಿಯಾತನಾಃ ।
ಏವಂ ಶತಸಹಸ್ರಾಣಿ ಲಕ್ಷಕೋಟಿಶತಾನಿ ಚ ॥ ೧೩೭ ॥

ನರಕಾಣಿ ನರೈಸ್ತತ್ರ ಭುಜ್ಯಂತೇ ಪಾಪಕಾರಿಭಿಃ ।
ಇಹ ಕೃತ್ವಾ ಸ್ವಲ್ಪಮಪಿ ನರಃ ಕರ್ಮಾಶುಭಾತ್ಮಕಂ ॥ ೧೩೮ ॥

ಪ್ರಾಪ್ನೋತಿ ನರಕೇ ಘೋರೇ ಯಮಲೋಕೇಷು ಯಾತನಾಂ ।
ನ ಶೃಣ್ವಂತಿ ನರಾ ಮೂಢಾ ಧರ್ಮೋಕ್ತಂ ಸಾಧು ಭಾಷಿತಂ ॥ ೧೩೯ ॥

ದೃಷ್ಟಂ ಕೇನೇತಿ ಪ್ರತ್ಯಕ್ಷಂ ಪ್ರತ್ಯುಕ್ತ್ಯೈವಂ ವದಂತಿ ತೇ ।
ದಿವಾ ರಾತ್ರೌ ಪ್ರಯತ್ನೇನ ಪಾಪಂ ಕುರ್ವಂತಿ ಯೇ ನರಾಃ ॥ ೧೪೦

---

೧೩೬. ಅಂಥವನ ಎದೆಯಲ್ಲಿ ಯಮಕಿಂಕರರು ಕಾದು ಕೆಂಪಗಾದ ಶೂಲವನ್ನು ಚುಚ್ಚುವರು. ಯಾವ ಮನುಷ್ಯರು ತಮ್ಮ ಮನಸ್ಸಿನಿಂದಲೂ, ಆಚರಣೆಯಿಂದಲೂ ಧರ್ಮದಲ್ಲಿ ಅಸಡ್ಡೆಯನ್ನು ತೋರುವರೋ–

೧೩೭. ಅಂಥವರು ಯಮಲೋಕದಲ್ಲಿ ಘೋರವಾದ ನಾನಾ ಯಾತನೆಗಳನ್ನು ಅನುಭವಿಸುವರು. ಈರೀತಿಯಾಗಿ ನೂರಾರು, ಸಾವಿರಾರು, ಲಕ್ಷ, ಕೋಟಿಗಟ್ಟಲೆ–

೧೩೮. ನರಕಗಳನ್ನು ಪಾಪಕಾರ್ಯಾಸಕ್ತರಾದ ಮಾನವರು ಅನುಭವಿಸುವರು. ಈ ಲೋಕದಲ್ಲಿ ಅತಿಸ್ವಲ್ಪ ಕೆಟ್ಟಕೆಲಸವನ್ನು ಮಾಡಿದರೂ, ಆ ಮನುಷ್ಯನು

೧೩೯. ಯಮಲೋಕದಲ್ಲಿ ಘೋರವಾದ ನರಕ ಯಾತನೆಯನ್ನು ಹೊಂದುವನು. ಮೂಢರಾದ ಮಾನವರು ಧರ್ಮಶಾಸ್ತ್ರವು ಹೇಳುವ ಹಿತವಾದ ಮಾತನ್ನು ಕೇಳುವುದಿಲ್ಲ.

೧೪೦. "ಯಾರು ಇದನ್ನು ಕಣ್ಣಾರೆ ಕಂಡವರು?" ಎಂದು ಹೇಳುತ್ತಾ ತಿರಸ್ಕರಿಸಿ ನುಡಿಯುವರು. ಯಾವ ಮನುಷ್ಯರು ಹಗಲು ರಾತ್ರಿಯೂ ಪ್ರಯತ್ನಪೂರ್ವಕವಾಗಿ ಪಾಪವನ್ನು ಮಾಡುವರೋ-

ನಾಚರಂತಿ ಹಿ ತೇ ಧರ್ಮಂ ಪ್ರಮಾದೇನಾಪಿ ಮೋಹಿತಾಃ ।
ಇಹೈವ ಫಲಭೋಕ್ತಾರಃ ಪರತ್ರ ವಿಮುಖಾಶ್ಚ ಯೇ ॥ ೧೪೧ ॥

ತೇ ಪತಂತಿ ಸುಘೋರೇಷು ನರಕೇಷು ನರಾಧಮಾಃ ।
ದಾರುಣೋ ನರಕೇ ವಾಸಃ ಸ್ವರ್ಗವಾಸಃ ಸುಖಪ್ರದಃ ।
ನರೈಃ ಸಂಪ್ರಾಪ್ಯತೇ ತತ್ರ ಕರ್ಮ ಕೃತ್ವಾ ಶುಭಾಶುಭಂ ॥ ೧೪೨ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ವ್ಯಾಸರ್ಷಿಸಂವಾದೇ
ನರಕಗತಪೃಥಗ್ಯಾತನಾಕೀರ್ತನಂ ನಾಮ
ಪಂಚದಶಾಧಿಕದ್ವಿಶತತಮೋಽಧ್ಯಾಯಃ

---

೧೪೧. ಮೋಹ ಹೊಂದಿದ ಯಾವ ಮನುಷ್ಯರು ಪ್ರಮಾದ ವಶದಿಂದಲಾದರೂ ತಪ್ಪಿ ಧರ್ಮವನ್ನು ಮಾಡುವುದಿಲ್ಲವೋ, ಯಾರು ಪರಲೋಕ ವಿಮುಖರಾಗಿ ಐಹಿಕವಾದ ಸುಖಭೋಗಗಳಲ್ಲೇ ಮಗ್ನರಾಗಿರುವರೋ-

೧೪೨. ಆ ನರಾಧಮರು ಅತಿದಾರುಣವಾದ ನರಕಗಳಲ್ಲಿ ಬಿದ್ದು ದುಃಖಗಳನ್ನು ಅನುಭವಿಸುವರು. ಶುಭಕರ್ಮಗಳನ್ನು ಮಾಡಿದವರು ಸ್ವರ್ಗದಲ್ಲಿ ಸುಖವನ್ನನುಭವಿಸುವರು. ಈ ರೀತಿಯಾಗಿ ಜನರು ತಾವು ಮಾಡಿದ ಶುಭಾಶುಭಕರ್ಮಗಳಿಗೆ ತಕ್ಕ ಫಲಗಳನ್ನು ಅನುಭವಿಸುವರು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ವ್ಯಾಸಋಷಿಸಂವಾದರೂಪವಾದ ನರಕಯಾತನಾ ನಿರೂಪಣವೆಂಬ ಇನ್ನೂರಹದಿನೈದನೆಯ ಅಧ್ಯಾಯವು ಮುಗಿದುದು.



ಶ್ರೀಃ

ಓಂ ತತ್ಸದ್ಬ್ರಹ್ಮಣೇನಮಃ

# ಅಥ ಮಹಾಪುರಾಣೇ ಬ್ರಾಹ್ಮೇ

## ಷೋಡಶಾಧಿಕದ್ವಿಶತತಮೋಽಧ್ಯಾಯಃ

॥ ಮುನಯ ಊಚುಃ ॥

ಅಹೋಽತಿದುಃಖಂ ಘೋರಂ ಚ ಯಮಮಾರ್ಗೇ ತ್ವಯೋದಿತಂ ।
ನರಕಾಣಿ ಚ ಘೋರಾಣಿ ದ್ವಾರಂ ಯಾಮ್ಯಂ ಚ ಸತ್ತಮ ॥ ೧ ॥

ಅಸ್ತ್ಯುಪಾಯೋ ನ ವಾ ಬ್ರಹ್ಮನ್ಯಮಮಾರ್ಗೇಽತಿಭೀಷಣೇ ।
ಬ್ರೂಹಿ ಯೇನ ನರಾ ಯಾಂತಿ ಸುಖೇನ ಯಮಸಾದನಂ ॥ ೨ ॥

---

### ಇನ್ನೂರಹದಿನಾರನೆಯ ಅಧ್ಯಾಯವು

೧. ಈ ವರ್ಣನೆಯನ್ನು ಕೇಳಿದನಂತರ ಆ ಮಹರ್ಷಿಗಳು ವ್ಯಾಸ ಮುನೀಂದ್ರನನ್ನು ಕುರಿತು ಓ ಸಾಧುವರೇಣ್ಯ ! ನೀನು ಹೇಳಿದ ಆ ಯಮ ಲೋಕಮಾರ್ಗವೂ, ನರಕಗಳೂ, ಯಮನಗರದ ದಕ್ಷಿಣದ್ವಾರವೂ ಬಹು ಘೋರವಾದುದು ಮತ್ತು ಅತಿದುಃಖಕರವಾದುದು.

೨. ಓ ಬ್ರಹ್ಮರ್ಷಿಗೇ! ಅತಿಭಯಂಕರವಾದ ಯಮಮಾರ್ಗದಲ್ಲಿ ಮನುಷ್ಯರು ಸುಖವಾಗಿ ಆತನ ನಗರವನ್ನು ಸೇರಲು ಯಾವುದೊಂದು ಉಪಾಯವೂ ಇಲ್ಲವೇ ? ಎಂದು ಪ್ರಶ್ನಿಸಿದರು.

॥ ವ್ಯಾಸ ಉವಾಚ ॥

ಇಹ ಯೇ ಧರ್ಮಸಂಯುಕ್ತಾಸ್ತ್ವಹಿಂಸಾನಿರತಾ ನರಾಃ ।
ಗುರುಶುಶ್ರೂಷಣೇ ಯುಕ್ತಾ ದೇವಬ್ರಾಹ್ಮಣಪೂಜಕಾಃ ॥ ೩ ॥

ಯಸ್ಮಿನ್ಮನುಷ್ಯಲೋಕಾಸ್ತೇ ಸಭಾರ್ಯಾಃ ಸಸುತಾಸ್ತಥಾ ।
ತಮಧ್ವಾನಂ ಚ ಗಚ್ಛಂತಿ ಯಥಾ ತತ್ಕಥಯಾಮಿ ವಃ ॥ ೪ ॥

ವಿಮಾನೈರ್ವಿವಿಧೈರ್ದಿವ್ಯೈಃ ಕಾಂಚನಧ್ವಜಶೋಭಿತೈಃ ।
ಧರ್ಮರಾಜಪುರಂ ಯಾಂತಿ ಸೇವಮಾನಾಪ್ಸರೋಗಣೈಃ ॥ ೫ ॥

ಬ್ರಾಹ್ಮಣೇಭ್ಯಸ್ತು ದಾನಾನಿ ನಾನಾರೂಪಾಣಿ ಭಕ್ತಿತಃ ।
ಯೇ ಪ್ರಯಚ್ಛಂತಿ ತೇ ಯಾಂತಿ ಸುಖೇನೈವ ಮಹಾಪಥೇ ॥ ೬ ॥

ಅನ್ನಂ ಯೇ ತು ಪ್ರಯಚ್ಛಂತಿ ಬ್ರಾಹ್ಮಣೇಭ್ಯಃ ಸುಸಂಸ್ಕೃತಂ ।
ಶ್ರೋತ್ರಿಯೇಭ್ಯೋ ವಿಶೇಷೇಣ ಭಕ್ತ್ಯಾ ಪರಮಯಾ ಯುತಾಃ ॥ ೭ ॥

---

೩–೪. ಆಗ ವ್ಯಾಸಮಹರ್ಷಿಯು ಅವರನ್ನು ಕುರಿತು ಇಂತೆಂದನು. ಎಲೈ ಮುನಿಗಳಿರಾ! ಈ ಲೋಕದಲ್ಲಿ ಯಾವ ಮನುಷ್ಯರು ಧರ್ಮಕಾರ್ಯಗಳನ್ನು ಮಾಡುವರೋ, ಯಾರು ಅಹಿಂಸೆಯಲ್ಲಿಯೇ ತೊಡಗಿರುವರೋ ಮತ್ತು ಯಾರು ಗುರುಶುಶ್ರೂಷೆ, ದೇವಬ್ರಾಹ್ಮಣಪೂಜೆಗಳನ್ನು ಮಾಡುವರೋ ಅಂಥವರು ತಮ್ಮ ಹೆಂಡಿರು ಮಕ್ಕಳುಗಳೊಡನೆ ಆ ಮಾರ್ಗದಲ್ಲಿ ಹೇಗೆ ಪ್ರಯಾಣ ಮಾಡುವರೋ ಅದನ್ನು ನಿಮಗೆ ವಿವರಿಸುವೆನು.

೫. ಅಂಥವರು ಚಿನ್ನದ ಧ್ವಜಗಳಿಂದ ಅಲಂಕೃತವಾದ ವಿವಿಧರೀತಿಯ ದಿವ್ಯವಾದ ವಿಮಾನಗಳನ್ನೇರಿ ಕುಳಿತು ಅಪ್ಸರಸ್ತ್ರೀಯರಿಂದ ಸೇವೆಯನ್ನು ಕೈಗೊಳ್ಳುತ್ತಾ ಧರ್ಮರಾಜನ ಪಟ್ಟಣವನ್ನು ಕುರಿತು ತೆರಳುವರು.

೬. ಯಾರು ಭಕ್ತಿಯಿಂದ ಬ್ರಾಹ್ಮಣರಿಗೆ ವಿಧವಿಧವಾದ ದಾನಗಳನ್ನು ಕೊಡುವರೋ ಅವರು ಆ ದೂತರ ಹಾದಿಯನ್ನು ಸುಖವಾಗಿ ದಾಟುವರು.

೭–೮. ಯಾರು ಬ್ರಾಹ್ಮಣರಿಗೆ ಅದರಲ್ಲಿಯೂ ವಿಶೇಷವಾಗಿ ಶ್ರೋತ್ರಿಯರಿಗೆ ಭಕ್ತ್ಯತಿಶಯದಿಂದ ಪಕ್ವಾನ್ನಗಳನ್ನು ಉಣಬಡಿಸುವರೋ ಅಂಥವರು

ತರುಣೀಭಿರ್ವರಸ್ತ್ರೀಭಿಃ ಸೇವ್ಯಮಾನಾಃ ಪ್ರಯತ್ನತಃ ।
ಧರ್ಮರಾಜಪುರಂ ಯಾಂತಿ ವಿಮಾನೈರಭ್ಯಲಂಕೃತೈಃ ॥ ೮ ॥

ಯೇ ಚ ಸತ್ಯಂ ಪ್ರಭಾಷಂತೇ ಬಹಿರಂತಶ್ಚ ನಿರ್ಮಲಾಃ ।
ತೇಽಪಿ ಯಾಂತ್ಯಮರಪ್ರಖ್ಯಾ ವಿಮಾನೈರ್ಯಮಮಂದಿರಂ ॥ ೯ ॥

ಗೋದಾನಾನಿ ಪವಿತ್ರಾಣಿ ವಿಷ್ಣುಮುದ್ದಿಶ್ಯ ಸಾಧುಷು ।
ಯೇ ಪ್ರಯಚ್ಛಂತಿ ಧರ್ಮಜ್ಞಾಃ ಕೃಶೇಷು ಕೃಶವೃತ್ತಿಷು ॥ ೧೦ ॥

ತೇ ಯಾಂತಿ ದಿವ್ಯವರ್ಣಾಭೈರ್ವಿಮಾನೈರ್ಮಣಿಚಿತ್ರಿತೈಃ ।
ಧರ್ಮರಾಜಪುರಂ ಶ್ರೀಮಾನ್ಸೇವ್ಯಮಾನಾಪ್ಸರೋಗಣೈಃ ॥ ೧೧ ॥

ಉಪಾನದ್ಯುಗಲಂ ಛತ್ರಂ ಶಯ್ಯಾಸನಮಥಾಪಿ ವಾ ।
ಯೇ ಪ್ರಯಚ್ಛಂತಿ ವಸ್ತ್ರಾಣಿ ತಥೈವಾಭರಣಾನಿ ಚ ॥ ೧೨

---

ಯೌವನವತಿಯರಾದ ಉತ್ತಮಾಂಗನೆಯರಿಂದ ಪ್ರಯತ್ನಪೂರ್ವಕವಾಗಿ ಸೇವಿಸಲ್ಪಡುವರು.

೯. ಯಾರು ಶುದ್ಧಹೃದಯರಾಗಿ ಅಂತರಂಗದಲ್ಲಿಯೂ ಬಹಿರಂಗದಲ್ಲಿಯೂ ಸತ್ಯವನ್ನೇ ನುಡಿಯುವರೋ ಅವರು ವಿಮಾನದಲ್ಲಿ ಕುಳಿತು ದೇವತೆಗಳಂತೆ ಯಮಲೋಕಕ್ಕೆ ತೆರಳುವರು.

೧೦–೧೧. ಯಾವ ಧರ್ಮಜ್ಞರು ವಿಷ್ಣುವನ್ನುದ್ದೇಶಿಸಿ ಜೀವನ ನಿರ್ವಾಹಕ್ಕೆ ತೊಂದರೆ ಪಡುತ್ತಾ ಕೃಶನಾಗಿರುವ ಸತ್ಪುರುಷರಿಗೆ ಪಾವನವಾದ ಗೋದಾನವನ್ನು ಮಾಡುವರೋ ಅಂತಹ ಪುಣ್ಯಾತ್ಮರು ದಿವ್ಯವಾದ ವರ್ಣದಿಂದ ರಂಜಿಸುತ್ತಾ ನಾನಾರೀತಿಯ ರತ್ನಗಳಿಂದ ಅಲಂಕರಿಸಲ್ಪಟ್ಟ ವಿಮಾನಗಳಲ್ಲಿ ಹತ್ತಿಕುಳಿತು ಅಪ್ಸರೆಯರಿಂದ ಸೇವೆಯನ್ನು ಕೈಗೊಳ್ಳುತ್ತಾ ಯಮರಾಜನ ಪಟ್ಟಣವನ್ನು ಸೇರುವರು.

೧೨-೧೩. ಯಾರು ಜೊತೆ ಪಾದುಕೆಗಳನ್ನೂ, ಛತ್ರಿಯನ್ನೂ, ಶಯನವನ್ನೂ (ಹಾಸಿಗೆ) ಆಸನವನ್ನೂ (ಕುಳಿತುಕೊಳ್ಳುವ ಪೀಠ) ವಸ್ತ್ರಗಳನ್ನೂ

ತೇ ಯಾಂತ್ಯಶ್ವೈ ರಥೈಶ್ಚೈವ ಕುಂಜರೈಶ್ಚಾಪ್ಯಲಂಕೃತಾಃ ।
ಧರ್ಮರಾಜಪುರಂ ದಿವ್ಯಂ ಛತ್ರೈಃ ಸೌವರ್ಣರಾಜತೈಃ ॥ ೧೩ ॥

ಯೇ ಚ ಭಕ್ತ್ಯಾ ಪ್ರಯಚ್ಛಂತಿ ಗುಡಪಾನಕಮುರ್ಚಿತಂ ।
ಓದನಂ ಚ ದ್ವಿಜಾಗ್ರ್ಯೇಭ್ಯೋ ವಿಶುದ್ಧೇನಾಂತರಾತ್ಮನಾ ॥ ೧೪ ॥

ತೇ ಯಾಂತಿ ಕಾಂಚನೈರ್ಯಾನೈರ್ವಿವಿಧೈಸ್ತು ಯಮಾಲಯಂ ।
ವರಸ್ತ್ರೀಭಿರ್ಯಥಾಕಾಮಂ ಸೇವ್ಯಮಾನಾಃ ಪುನಃ ಪುನಃ ॥ ೧೫ ॥

ಯೇ ಚ ಕ್ಷೀರಂ ಪ್ರಯಚ್ಛಂತಿ ಘೃತಂ ದಧಿ ಗುಡಂ ಮಧು ।
ಬ್ರಾಹ್ಮಣೇಭ್ಯಃ ಪ್ರಯತ್ನೇನ ಶುದ್ಧ್ಯೋಪೇತಂ ಸುಸಂಸ್ಕೃತಂ ॥ ೧೬ ॥

ಚಕ್ರವಾಕಪ್ರಯುಕ್ತೈಶ್ಚ ವಿಮಾನೈಸ್ತು ಹಿರಣ್ಮಯೈಃ ।
ಯಾಂತಿ ಗಂಧರ್ವವಾದಿತ್ರೈಃ ಸೇವ್ಯಮಾನಾ ಯಮಾಲಯಂ ॥ ೧೭ ॥

---

ಒಡವೆಗಳನ್ನೂ ದಾನಮಾಡುವರೋ ಅವರು ಕುದುರೆಗಳ ಮೇಲೂ, ತೇರುಗಳ ಮೇಲೂ ಕುಳಿತು, ದಿವ್ಯವಾದ ಆಭರಣಗಳನ್ನು ತೊಟ್ಟು ಬೆಳ್ಳಿಯ ಅಥವಾ ಚಿನ್ನ ಛತ್ರಿಗಳನ್ನು ಹಿಡಿಸಿಕೊಂಡು ಯಮಪುರಕ್ಕೆ ಹೋಗುವರು.

೧೪–೧೫. ಯಾರು ಶುದ್ಧವಾದ ಹೃದಯದಿಂದ ಶ್ರೇಷ್ಠರಾದ ಬ್ರಾಹ್ಮಣರಿಗೆ ಸೊಗಸಾದ ಪಾನಕವನ್ನು ಭಕ್ತಿಯಿಂದ ಸಮರ್ಪಿಸುವರೋ ಮತ್ತು ಅನ್ನ ದಾನಮಾಡುವರೋ ಅವರು ವಿಧವಿಧವಾದ ರೀತಿಯ ಚಿನ್ನದ ಯಾನಗಳಲ್ಲಿ (ಪಲ್ಲಕ್ಕಿ ಮೊದಲಾದುವು) ಕುಳಿತು ಇಷ್ಟಾನುಸಾರವಾಗಿ ಸೊಗಸಾದ ಸ್ತ್ರೀಯರಿಂದ ಸೇವಿಸಲ್ಪಡುತ್ತಾ ಯಮಪಟ್ಟಣಕ್ಕೆ ತೆರಳುವರು.

೧೬–೧೭. ಯಾರು ಹಾಲನ್ನೂ ಮೊಸರನ್ನೂ ತುಪ್ಪವನ್ನೂ ಬೆಲ್ಲವನ್ನೂ ಜೇನುತುಪ್ಪವನ್ನೂ ಶುದ್ಧವಾಗಿ ಸಂಸ್ಕರಿಸಿ ಬ್ರಾಹ್ಮಣರಿಗೆ ಪ್ರಯತ್ನಪೂರ್ವಕವಾಗಿ ದಾನಮಾಡುವರೋ ಅಂಥವರು ಮುಂದುಗಡೆ ಗಂಧರ್ವರು ಇಂಪಾಗಿ ವಾದ್ಯಗಳನ್ನು ಬಾರಿಸುತ್ತಿರುವುದನ್ನು ಆಲಿಸುತ್ತಾ ಚಕ್ರವಾಕಪಕ್ಷಿಗಳು ಸೆಳೆಯುವ ವಿಮಾನದಲ್ಲಿ ಕುಳಿತು ಯಮರಾಜಧಾನಿಗೆ ಹೋಗುವರು.

ಯೇ ಫಲಾನಿ ಪ್ರಯಚ್ಛಂತಿ ಪುಷ್ಪಾಣಿ ಸುರಭೀಣಿ ಚ ।
ಹಂಸಯುಕ್ತೈರ್ವಿಮಾನೈಸ್ತು ಯಾಂತಿ ಧರ್ಮಪುರಂ ನರಾಃ　　॥ ೧೮ ॥

ಯೇ ತಿಲಾಂಸ್ತಿಲಧೇನುಂ ಚ ಘೃತಧೇನುಮಥಾಪಿ ವಾ ।
ಶ್ರೋತ್ರಿಯೇಭ್ಯಃ ಪ್ರಯಚ್ಛಂತಿ ವಿಪ್ರೇಭ್ಯಃ ಶ್ರದ್ಧಯಾನ್ವಿತಾಃ　　॥ ೧೯ ॥

ಸೋಮಮಂಡಲಸಂಕಾಶೈರ್ಯಾನೈಸ್ತೇ ಯಾಂತಿ ನಿರ್ಮಲೈಃ ।
ಗಂಧರ್ವೈರುಪಗೀಯಂತೇ ಪುರೇ ವೈವಸ್ವತಸ್ಯ ತೇ　　॥ ೨೦ ॥

ಯೇಷಾಂ ವಾಪ್ಯಶ್ಚ ಕೂಪಾಶ್ಚ ತಡಾಗಾನಿ ಸರಾಂಸಿ ಚ ।
ದೀರ್ಘಿಕಾಃ ಪುಷ್ಕರಿಣ್ಯಶ್ಚ ಶೀತಲಾಶ್ಚ ಜಲಾಶಯಾಃ　　॥ ೨೧ ॥

ಯಾನೈಸ್ತೇ ಹೇಮಚಂದ್ರಾಭೈರ್ದಿವ್ಯಘಂಟಾನಿನಾದಿತೈಃ ।
ವ್ಯಜನೈಸ್ತಾಲವೃಂತೈಶ್ಚ ವೀಜ್ಯಮಾನಾ ಮಹಾಪ್ರಭಾಃ　　॥ ೨೨ ॥

---

೧೮. ಯಾವ ಮಾನವರು ರುಚಿಕರವಾದ ಹಣ್ಣುಹಂಪಲುಗಳನ್ನೂ ಪರಿಮಳದಿಂದ ಕೂಡಿದ ಹೂಗಳನ್ನೂ ದಾನಮಾಡುವರೋ ಅವರು ಹಂಸಗಳನ್ನು ಕಟ್ಟಿದ ವಿಮಾನದಲ್ಲಿ ಕುಳಿತು ಧರ್ಮರಾಜನ ಪಟ್ಟಣವನ್ನು ಸೇರುವರು.

೧೯-೨೦. ಯಾರು ತಿಲವನ್ನೂ, ತಿಲದಿಂದ ಮಾಡಿದ ಧೇನುವನ್ನೂ ತುಪ್ಪದಲ್ಲಿ ನಿರ್ಮಿಸಿದ ಧೇನುವನ್ನೂ, ಶ್ರೋತ್ರಿಯರಾದ ಬ್ರಾಹ್ಮಣರಿಗೆ ಶ್ರದ್ಧಾಪೂರ್ವಕವಾಗಿ ದಾನಮಾಡುವರೋ ಅವರು ಚಂದ್ರಮಂಡಲವನ್ನು ಹೋಲುವ ನಿರ್ಮಲವಾದ ವಿಮಾನಗಳಲ್ಲಿ ಕುಳಿತು ಯಮಪಟ್ಟಣವನ್ನು ಸೇರುವರು ಮತ್ತು ಅಲ್ಲಿ ಗಂಧರ್ವರಿಂದ ಸ್ತುತಿಸಲ್ಪಡುವರು.

೨೧-೨೨. ಯಾರು ತಂಪಾದ ವಾಪೀಕೂಪಗಳನ್ನೂ, ತಟಾಕಗಳನ್ನೂ ಸರಸ್ಸುಗಳನ್ನೂ, ದೀರ್ಘಿಕೆಗಳನ್ನೂ, ಪುಷ್ಕರಣಿಗಳನ್ನೂ (ಚಚ್ಚೌಕನಾದ ಕೊಳ) ಕಟ್ಟಿಸುವರೋ ಅವರು ದಿವ್ಯವಾದ ಗಂಟೆಗಳನ್ನು ಕಟ್ಟಿರುವ ಮತ್ತು ಚಿನ್ನದಂತೆಯೂ, ಚಂದ್ರನಂತೆಯೂ ಹೊಳೆಯುವ ವಿಮಾನಗಳನ್ನೇರಿ ಕುಳಿತು ವ್ಯಜನಗಳಿಂದಲೂ, ತಾಲವೃಂತಗಳಿಂದಲೂ ಬೀಸಿಸಿಕೊಳ್ಳಲ್ಪಡುತ್ತಾ ದಿವ್ಯವಾದ ಕಾಂತಿಯಿಂದ ಕೂಡಿ ಆ ಯಮಪುರವನ್ನು ಸೇರುವರು.

ಯೇಷಾಂ ದೇವಕುಲಾನ್ಯತ್ರ ಚಿತ್ರಾಣ್ಯಾಯತನಾನಿ ಚ ।
ರತ್ನೈಃ ಪ್ರಸ್ಫುರಮಾಣಾನಿ ಮನೋಜ್ಞಾನಿ ಶುಭಾನಿ ಚ ॥ ೨೩ ॥

ತೇ ಯಾಂತಿ ಲೋಕಪಾಲೈಸ್ತು ವಿಮಾನೈರ್ವಾತರಂಹಸೈಃ ।
ಧರ್ಮರಾಜಪುರಂ ದಿವ್ಯಂ ನಾನಾಜನಸಮಾಕುಲಂ ॥ ೨೪ ॥

ಪಾನೀಯಂ ಯೇ ಪ್ರಯಚ್ಛಂತಿ ಸರ್ವಪ್ರಾಣ್ಯುಪಜೀವಿತಂ ।
ತೇ ವಿತೃಷ್ಣಾಃ ಸುಖಂ ಯಾಂತಿ ವಿಮಾನೈಸ್ತಂ ಮಹಾಪಥಂ ॥ ೨೫ ॥

ಕಾಷ್ಠಪಾದುಕಯಾನಾನಿ ಪೀಠಕಾನ್ಯಾಸನಾನಿ ಚ ।
ಯೈರ್ದತ್ತಾನಿ ದ್ವಿಜಾತಿಭ್ಯಸ್ತೇಽಧ್ವಾನಂ ಯಾಂತಿ ವೈ ಸುಖಂ ॥ ೨೬ ॥

ಸೌವರ್ಣಮಣಿಪೀಠೇಷು ಪಾದೌ ಕೃತ್ವೋತ್ತಮೇಷು ಚ ।
ತೇ ಪ್ರಯಾಂತಿ ವಿಮಾನೈಸ್ತು ಅಪ್ಸರೋಗಣಮಂಡಿತೈಃ ॥ ೨೭ ॥

---

೨೩–೨೪. ಯಾರು ರತ್ನಗಳಿಂದ ಥಳಥಳಿಸುತ್ತಾ ಮನೋಹರವಾಗಿಯೂ, ಮಂಗಲಕರವಾಗಿಯೂ ಇರುವ ದೇವಾಲಯಗಳನ್ನೂ, ಸೊಗಸಾದ ಮನೆಗಳನ್ನೂ ಕಟ್ಟಿಸುವರೋ ಅವರು ದಿಕ್ಪಾಲಕರೊಂದಿಗೆ ಗಾಳಿಯಂತೆ ವೇಗವಾಗಿ ಹೋಗುವ ವಿಮಾನಗಳಲ್ಲಿ ಕುಳಿತು ಬಗೆಬಗೆಯ ಜನರಿಂದ ತುಂಬಿರುವ ದಿವ್ಯವಾದ ಯಮರಾಜಧಾನಿಯನ್ನು ಪ್ರವೇಶಿಸುವರು.

೨೫. ಎಲ್ಲ ಪ್ರಾಣಿಗಳಿಗೂ ಜೀವನಾಧಾರವಾದ ನೀರನ್ನು ಯಾರು ದಾನ ಮಾಡುವರೋ ಅವರು ಬಾಯಾರಿಕೆಯೇ ಇಲ್ಲದೆ ವಿಮಾನಗಳಲ್ಲಿ ಕುಳಿತು ಆ ದೂರದ ದಾರಿಯನ್ನು ಸುಖವಾಗಿ ದಾಟುವರು.

೨೬. ಯಾರು ಹಾವುಗೆಗಳನ್ನೂ, ಪೀಠಗಳನ್ನೂ ಇತರರೀತಿಯ ಆಸನಗಳನ್ನೂ ಬ್ರಾಹ್ಮಣರಿಗೆ ದಾನಮಾಡುವರೋ ಅವರು ಯಾವೊಂದು ಕಷ್ಟವೂ ಇಲ್ಲದೆ ಸುಖವಾಗಿ ದಾರಿಯನ್ನು ದಾಟುವರು.

೨೭. ಅಂಥವರು ಸುವರ್ಣ ಅಥವಾ ರತ್ನಗಳಿಂದ ನಿರ್ಮಿಸಲ್ಪಟ್ಟ ಪೀಠಗಳಮೇಲೆ ಕಾಲನ್ನೂರಿಕೊಂಡು ಅಪ್ಸರಸ್ತ್ರೀಯರಿಂದ ತುಂಬಿರುವ ವಿಮಾನಗಳಲ್ಲಿ ಕುಳಿದು ಯಮಪುರಕ್ಕೆ ಹೋಗುವರು.

ಆರಾಮಾಣಿ ವಿಚಿತ್ರಾಣಿ ಪುಷ್ಪಾಢ್ಯಾನೀಹ ಮಾನವಾಃ ।
ರೋಪಯಂತಿ ಫಲಾಢ್ಯಾನಿ ನರಾಣಾಮುಪಕಾರಿಣಃ ॥ ೨೮ ॥

ವೃಕ್ಷಚ್ಛಾಯಾಸು ರಮ್ಯಾಸು ಶೀತಲಾಸು ಸ್ವಲಂಕೃತಾಃ ।
ವರಸ್ತ್ರೀಗೀತವಾದ್ಯೈಶ್ಚ ಸೇವ್ಯಮಾನಾ ವ್ರಜಂತಿ ತೇ ॥ ೨೯ ॥

ಸುವರ್ಣಂ ರಜತಂ ವಾಪಿ ವಿದ್ರುಮಂ ಮೌಕ್ತಿಕಂ ತಥಾ ।
ಯೇ ಪ್ರಯಚ್ಛಂತಿ ತೇ ಯಾಂತಿ ವಿಮಾನೈಃ ಕನಕೋಜ್ಜ್ವಲೈಃ ॥ ೩೦ ॥

ಭೂಮಿದಾ ದೀಪ್ಯಮಾನಾಶ್ಚ ಸರ್ವಕಾಮೈಸ್ತು ತರ್ಪಿತಾಃ ।
ಉದಿತಾದಿತ್ಯಸಂಕಾಶೈರ್ವಿಮಾನೈರ್ಘಂಟನಾದಿತೈಃ ॥ ೩೧ ॥

---

೨೮-೨೯. ಯಾರು ಜನರಿಗೆ ಉಪಯೋಗವಾಗಲೆಂದು ಫಲಪುಷ್ಪ ಭರಿತಗಳಾದ ಮರಗಳನ್ನು ನೆಡಿಸಿ ರಮಣೀಯವಾದ ಉದ್ಯಾನವನಗಳನ್ನು ನಿರ್ಮಿಸುವರೋ ಅವರು ಮನೋಹರವೂ ಶೀತಲವೂ ಆದ ಮರದ ನೆರಳಲ್ಲಿ ಕುಳಿತು, ಸೊಗಸಾಗಿ ಅಲಂಕಾರವನ್ನು ಮಾಡಿಕೊಂಡು, ಚೆಲುವೆಯರಾದ ಸ್ತ್ರೀಯರು ಹಾಡುವ ಇಂಪಾದ ಗಾನವನ್ನೂ ನುಡಿಸುವ ವಾದ್ಯಗಳನ್ನೂ ಆಲಿಸುತ್ತಾ ಸುಖವಾಗಿ ಆ ಪಟ್ಟಣವನ್ನು ಸೇರುವರು.

೩೦. ಯಾರು ಚಿನ್ನವನ್ನಾಗಲಿ ಬೆಳ್ಳಿಯನ್ನಾಗಲಿ ಹವಳವನ್ನಾಗಲಿ ಮುತ್ತನ್ನಾಗಲಿ ದಾನಮಾಡುವರೋ ಅವರು ಚಿನ್ನದಿಂದ ನಿರ್ಮಿತವಾಗಿ ಥಳಥಳಿಸುವ ವಿಮಾನದಲ್ಲಿ ಕುಳಿತು ಯಮಪುರಿಗೆ ಹೋಗುವರು.

೩೧. ಭೂಮಿದಾನಮಾಡಿದ ಮಹನೀಯರು ತೇಜಸ್ಸಿನಿಂದ ಹೊಳೆಯುತ್ತಾ, ಎಲ್ಲ ಬಗೆಯ ಇಷ್ಟಾರ್ಥಗಳನ್ನೂ ಪಡೆದು ಉದಯಿಸುತ್ತಿರುವ ಸೂರ್ಯನಂತೆ ಮೆರೆಯುತ್ತಿರುವ, ಕಿರುಗಂಟೆಗಳ ಧ್ವನಿಯಿಂದ ಕೂಡಿದ ವಿಮಾನಗಳಲ್ಲಿ ಕುಳಿತು ಅಲ್ಲಿಗೆ ಸೇರುವರು.

ಕನ್ಯಾಂ ತು ಯೇ ಪ್ರಯಚ್ಛಂತಿ ಬ್ರಹ್ಮದೇಯಾಮಲಂಕೃತಾಂ ।
ದಿವ್ಯಕನ್ಯಾವೃತಾ ಯಾಂತಿ ವಿಮಾನೈಸ್ತೇ ಯಮಾಲಯಂ ॥ ೩೨ ॥

ಸುಗಂಧಾಗುರುಕರ್ಪೂರಾನ್ಪುಷ್ಪಧೂಪಾನ್ದ್ವಿಜೋತ್ತಮಾಃ ।
ಪ್ರಯಚ್ಛಂತಿ ದ್ವಿಜಾತಿಭ್ಯೋ ಭಕ್ತ್ಯಾ ಪರಮಯಾನ್ವಿತಾಃ ॥ ೩೩ ॥

ತೇ ಸುಗಂಧಾಃ ಸುವೇಷಾಶ್ಚ ಸುಪ್ರಭಾಃ ಸುವಿಭೂಷಿತಾಃ ।
ಯಾಂತಿ ಧರ್ಮಪುರಂ ಯಾನೈರ್ವಿಚಿತ್ರೈರಭ್ಯಲಂಕೃತಾಃ ॥ ೩೪ ॥

ದೀಪದಾ ಯಾಂತಿ ಯಾನೈಶ್ಚ ದೀಪಯಂತೋ ದಿಶೋ ದಶ ।
ಆದಿತ್ಯಸದೃಶೈರ್ಯಾನೈರ್ದೀಪ್ಯಮಾನಾ ಯಥಾಗ್ನಯಃ ॥ ೩೫ ॥

ಗೃಹಾವಸಥದಾತಾರೋ ಗೃಹೈಃ ಕಾಂಚನಮಂಡಿತೈಃ ।
ವ್ರಜಂತಿ ಬಾಲಾರ್ಕನಿಭೈರ್ಧರ್ಮರಾಜಗೃಹಂ ನರಾಃ ॥ ೩೬ ॥

---

೩೨. ಯಾರು ಕನ್ಯೆಯನ್ನು ಅಲಂಕರಿಸಿ ಬ್ರಾಹ್ಮಣನಿಗೆ ದಾನ ಮಾಡುವರೋ ಅವರು ವಿಮಾನದಲ್ಲಿ ದೇವಲೋಕದ ಕನ್ಯೆಯರ ನಡುವೆ ಕುಳಿತು ಯಮಪುರವನ್ನು ಸಾರುವರು.

೩೩-೩೪. ಎಲೈ ಮುನಿಗಳಿರಾ! ಯಾರು ಮಹಾಭಕ್ತಿಯಿಂದ ಬ್ರಾಹ್ಮಣರಿಗೆ ಸುವಾಸನಾಭರಿತವಾದ ಅಗುರುಗಳನ್ನೂ ಕರ್ಪೂರವನ್ನೂ ಪುಷ್ಪಧೂಪಗಳನ್ನೂ ದಾನಮಾಡುವರೋ ಅವರು ಸೊಗಸಾದ ವೇಷಭೂಷಣಗಳಿಂದ ಕಂಗೊಳಿಸುತ್ತಾ ಸುವಾಸನೆಯಿಂದ ಕೂಡಿದ ದೇಹವುಳ್ಳವರಾಗಿ ವಿಚಿತ್ರವಾದ ವಿಮಾನಗಳಿಂದ ಧರ್ಮರಾಜನ ಪಟ್ಟಣಕ್ಕೆ ತೆರಳುವರು.

೩೫. ದೀಪದಾನಮಾಡಿದವರು ಸೂರ್ಯನಂತೆ ಹೊಳೆಯುವ ವಿಮಾನಗಳಲ್ಲಿ ಕುಳಿತು ಜ್ವಲಿಸುತ್ತಿರುವ ಅಗ್ನಿಗಳಂತೆ ಹತ್ತು ದಿಕ್ಕುಗಳನ್ನೂ ಬೆಳಗುತ್ತಾ ಪ್ರಯಾಣಮಾಡುವರು.

೩೬. ಯಾರು ಮನೆಮಠಗಳನ್ನು ದಾನಮಾಡಿರುವರೋ ಅವರು ಸುವರ್ಣಭೂಷಿತವಾದ, ಎಳೆಯ ಬಿಸಿಲನ್ನು ಹೋಲುವ ಮನೆಗಳಲ್ಲಿ ಕುಳಿತು ಪಯಣಬೆಳಸುವರು.

**ಜಲಭಾಜನದಾತಾರಃ ಕುಂಡಿಕಾಕರಕಪ್ರದಾಃ ।**
**ಪೂಜ್ಯಮಾನಾಪ್ಸರೋಭಿಶ್ಚ ಯಾಂತಿ ದೃಪ್ತಾ ಮಹಾಗಜೈಃ ॥ ೩೭ ॥**

**ಪಾದಾಭ್ಯಂಗಂ ಶಿರೋಭ್ಯಂಗಂ ಸ್ನಾನಪಾನೋದಕಂ ತಥಾ ।**
**ಯೇ ಪ್ರಯಚ್ಛಂತಿ ವಿಪ್ರೇಭ್ಯಸ್ತೇ ಯಾಂತ್ಯಶ್ವೈರ್ಯಮಾಲಯಂ ॥ ೩೮ ॥**

**ವಿಶ್ರಾಮಯಂತಿ ಯೇ ವಿಪ್ರಾನ್ ಶ್ರಾಂತಾನಧ್ವನಿ ಕರ್ಶಿತಾನ್ ।**
**ಚಕ್ರವಾಕಪ್ರಯುಕ್ತೇನ ಯಾಂತಿ ಯಾನೇನ ತೇ ಸುಖಂ ॥ ೩೯ ॥**

**ಸ್ವಾಗತೇನ ಚ ಯೋ ವಿಪ್ರಂ ಪೂಜಯೇದಾಸನೇನ ಚ ।**
**ಸ ಗಚ್ಛತಿ ತಮಧ್ವಾನಂ ಸುಖಂ ಪರಮನಿರ್ವೃತಃ ॥ ೪೦ ॥**

**ನಮೋ ಬ್ರಹ್ಮಣ್ಯದೇವೇತಿ ಯೋ ಹರಿಂ ಚಾಭಿವಾದಯೇತ್ ।**
**ಗಾಂ ಚ ಪಾಪಹರೇತ್ಯುಕ್ತ್ವಾ ಸುಖಂ ಯಾಂತಿ ಚ ತತ್ಪಥಂ ॥ ೪೧ ॥**

---

೩೭. ಯಾರು ಕಮಂಡಲು ಮೊದಲಾದ ನೀರು ತುಂಬಿದ ಪಾತ್ರೆಗಳನ್ನು ದಾನಮಾಡುವರೋ ಅವರು ಮದ್ದಾನೆಗಳಮೇಲೆ ಕುಳಿತು ಅಪ್ಸರಸ್ತ್ರೀಯರಿಂದ ಸೇವೆಯನ್ನು ಕೈಕೊಳ್ಳುತ್ತಾ ಯಮಪುರಕ್ಕೆ ಹೋಗುವರು.

೩೮. ಯಾರು ಬ್ರಾಹ್ಮಣರಿಗೆ ಕಾಲಿಗೂ, ತಲೆಗೂ ಚೆನ್ನಾಗಿ ಎಣ್ಣೆಯನ್ನು ತಿಕ್ಕಿ ನೀರುಹಾಕಿ ಸ್ನಾನಮಾಡಿಸುವರೋ ಅವರು ಕುದುರೆಗಳಮೇಲೆ ಕುಳಿತು ಯಮಪುರವನ್ನು ಪ್ರವೇಶಿಸುವರು.

೩೯. ಯಾರು ದಾರಿನಡೆದು ಆಯಾಸವಾಗಿ ಬಂದ ಬ್ರಾಹ್ಮಣರಿಗೆ ವಿಶ್ರಾಂತಿಯನ್ನು ಇತ್ತು ಉಪಚರಿಸುವರೋ ಅವರು ಚಕ್ರವಾಕಗಳನ್ನು ಕಟ್ಟಿದ ವಿಮಾನದಲ್ಲಿ ಕುಳಿತು ಸುಖವಾಗಿ ಅಲ್ಲಿಗೆ ಪ್ರಯಾಣಮಾಡುವರು.

೪೦. ಯಾವನು ಬಂದ ಬ್ರಾಹ್ಮಣನನ್ನು ಸ್ವಾಗತವಿತ್ತು ಆಸನಾದಿಗಳಿಂದ ಉಪಚಾರಮಾಡುವನೋ ಅವನು ಬಹಳ ಸಂತೋಷವನ್ನು ತಾಳಿ ಸುಖದಿಂದ ಆ ದಾರಿಯಲ್ಲಿ ಪ್ರಯಾಣ ಬೆಳೆಸುವನು.

೪೧. ಯಾವನು ಶ್ರೀಹರಿಯನ್ನು 'ಬ್ರಹ್ಮಣ್ಯದೇವಾಯ ನಮಃ' ಎಂಬುದಾಗಿಯೂ, ಗೋವನ್ನು ಪಾಪಹರಾ (ಪಾಪ ಪರಿಹಾರಿಣಿ) ಎಂದೂ ನಮಸ್ಕರಿಸುವನೋ ಅವನು ಸುಖವಾಗಿ ಆ ದಾರಿಯನ್ನು ದಾಟುವನು.

ಅನಂತರಾಶಿನೋ ಯೇ ಚ ದಂಭಾನೃತವಿವರ್ಜಿತಾಃ ।
ತೇಽಪಿ ಸಾರಸಯುಕ್ತೈಸ್ತು ಯಾಂತಿ ಯಾನೈಶ್ಚ ತತ್ಪಥಂ ॥ ೪೨ ॥

ವರ್ತಂತೇ ಹ್ಯೇಕಭಕ್ತೇನ ಶಾಠ್ಯದಂಭವಿವರ್ಜಿತಾಃ ।
ಹಂಸಯುಕ್ತೈರ್ವಿಮಾನೈಸ್ತು ಸುಖಂ ಯಾಂತಿ ಯಮಾಲಯಂ ॥ ೪೩ ॥

ಚತುರ್ಥೇನೈಕಭಕ್ತೇನ ವರ್ತಂತೇ ಯೇ ಜಿತೇಂದ್ರಿಯಾಃ ।
ತೇ ಯಾಂತಿ ಧರ್ಮನಗರಂ ಯಾನೈರ್ಬರ್ಹಿಣಯೋಜಿತೈಃ ॥ ೪೪ ॥

ತೃತೀಯೇ ದಿವಸೇ ಯೇ ತು ಭುಂಜತೇ ನಿಯತವ್ರತಾಃ ।
ತೇಽಪಿ ಹಸ್ತಿರಥೈರ್ದಿವ್ಯೈರ್ಯಾಂತಿ ಯಾನೈಶ್ಚ ತತ್ಪದಂ ॥ ೪೫ ॥

ಷಷ್ಠೇಽನ್ನಭಕ್ಷಕೋ ಯಸ್ತು ಶೌಚನಿತ್ಯೋ ಜಿತೇಂದ್ರಿಯಃ ।
ಸ ಯಾತಿ ಕುಂಜರಸ್ಥಸ್ತು ಶಚೀಪತಿರಿವ ಸ್ವಯಂ ॥ ೪೬ ॥

---

೪೨. ಯಾರು ಊಟಕ್ಕೆ ಮೊದಲು ಕುಳಿತುಕೊಳ್ಳದೆ ಎಲ್ಲರಿಗೂ ಆದನಂತರ ಕುಳಿತುಕೊಳ್ಳುವರೋ, ಯಾರು ದಂಭವನ್ನೂ ಸುಳ್ಳನ್ನೂ ಬಿಟ್ಟಿರುವರೋ ಅವರು ಸಾರಸಗಳೆಳೆದೊಯ್ಯುವ ವಿಮಾನದಲ್ಲಿ ಕುಳಿತು ಅಲ್ಲಿಗೆ ಸಾರುವರು.

೪೩. ಯಾರು ಆಡಂಬರವನ್ನೂ ಹಟವನ್ನೂ ತೊರೆದು, ಒಂದೇ ಹೊತ್ತು ಊಟಮಾಡುತ್ತಾ ಇರುವರೋ ಅವರು ಹಂಸಗಳನ್ನು ಕಟ್ಟಿದ ವಿಮಾನವೇರಿ ಸುಖವಾಗಿ ಯಮನಪಟ್ಟಣಕ್ಕೆ ಹೋಗುವರು.

೪೪. ಯಾರು ನಾಲ್ಕುದಿನಗಳಿಗೊಮ್ಮೆ ಒಂದುಸಲ ಮಾತ್ರ ಊಟಮಾಡುವರೋ ಅವರು ನವಿಲುಗಳು ಕಟ್ಟಿದ ವಿಮಾನಗಳಲ್ಲಿ ಕುಳಿತು ಯಮಧರ್ಮರಾಜನ ನಗರಕ್ಕೆ ತೆರಳುವರು.

೪೫. ಯಾರು ನಿಯಮತತ್ಪರರಾಗಿ ಮೂರುದಿನಗಳಿಗೊಮ್ಮೆ ಊಟಮಾಡುವರೋ ಅವರು ಆನೆಗಳನ್ನು ಕಟ್ಟಿದ ರಥದಲ್ಲಿ ಕುಳಿತು ಅವನ ಪುರವನ್ನು ಪ್ರವೇಶಿಸುವರು.

೪೬. ಯಾರು ಶುಚಿಯಾಗಿ, ಇಂದ್ರಿಯಗಳನ್ನು ಜಯಿಸಿ ಆರುದಿನಗಳಿಗೊಮ್ಮೆ ಊಟಮಾಡುವರೋ ಅವರು ಸಾಕ್ಷಾತ್ ದೇವೇಂದ್ರನಂತೆ ಆನೆಯ ಮೇಲೆ ಕುಳಿತು ತೆರಳುವರು.

ಧರ್ಮರಾಜಪುರಂ ದಿವ್ಯಂ ನಾನಾಮಣಿವಿಭೂಷಿತಂ ।
ನಾನಾಸ್ವರಸಮಾಯುಕ್ತಂ ಜಯಶಬ್ದರವೈರ್ಯುತಂ ॥ ೪೭ ॥

ಪಕ್ಷೋಪವಾಸಿನೋ ಯಾಂತಿ ಯಾನೈಃ ಶಾರ್ದೂಲಯೋಜಿತೈಃ ।
ಪುರಂ ತದ್ಧರ್ಮರಾಜಸ್ಯ ಸೇವ್ಯಮಾನಾಃ ಸುರಾಸುರೈಃ ॥ ೪೮ ॥

ಯೇ ಚ ಮಾಸೋಪವಾಸಂ ತು ಕುರ್ವತೇ ಸಂಯತೇಂದ್ರಿಯಾಃ ।
ತೇಽಪಿ ಸೂರ್ಯಪ್ರದೀಪ್ತೈಸ್ತು ಯಾಂತಿ ಯಾನೈರ್ಯಮಾಲಯಂ ॥ ೪೯ ॥

ಮಹಾಪ್ರಸ್ಥಾನಮೇಕಾಗ್ರೋ ಯಃ ಪ್ರಯಾತಿ ದೃಢವ್ರತಃ ।
ಸೇವ್ಯಮಾನಸ್ತು ಗಂಧರ್ವೈರ್ಯಾತಿ ಯಾನೈರ್ಯಮಾಲಯಂ ॥ ೫೦ ॥

ಶರೀರಂ ಸಾಧಯೇದ್ಯಸ್ತು ವೈಷ್ಣವೇನಾಂತರಾತ್ಮನಾ ।
ಸ ರಥೇನಾಗ್ನಿವರ್ಣೇನ ಯಾತೀಹ ತ್ರಿದಶಾಲಯಂ ॥ ೫೧ ॥

---

೪೭-೪೮. ನಾನಾವಿಧವಾದ ರತ್ನಗಳಿಂದ ಅಲಂಕರಿಸಲ್ಪಟ್ಟು, ಬಗೆ ಬಗೆಯಾದ ಧ್ವನಿಗಳಿಂದ ತುಂಬಿ, ಜಯಜಯ ಎಂಬ ಶಬ್ದಗಳನ್ನೊಳಗೊಂಡು ರಮಣೀಯವಾಗಿರುವ ಆ ಯಮರಾಜಧಾನಿಯನ್ನು ಹದಿನೈದು ದಿನಗಳಿಗೊಮ್ಮೆ ಊಟಮಾಡುವ ಮಹನೀಯರು ಹುಲಿಗಳನ್ನು ಕಟ್ಟಿದ ರಥದಲ್ಲಿ ಕುಳಿತು ಸುರಾಸುರರಿಂದ ಸೇವೆಯನ್ನು ಕೈಗೊಳ್ಳುತ್ತಾ ತೆರಳುವರು.

೪೯. ಯಾವ ಜಿತೇಂದ್ರಿಯರು ತಿಂಗಳು ಪೂರ್ತಿ ಉಪವಾಸವಿರುವರೋ ಅವರು ಸೂರ್ಯನಂತೆ ಉಜ್ಜ್ವಲವಾದ ವಿಮಾನಗಳಲ್ಲಿ ಕುಳಿತು ಆ ಯಮಾಲಯವನ್ನು ಕುರಿತು ತೆರಳುವರು.

೫೦. ಯಾವನು ನಿಷ್ಠೆಯನ್ನು ದೃಢವಾಗಿ ಅವಲಂಬಿಸಿ ಏಕಾಗ್ರತೆಯಿಂದ ಮಹಾಪ್ರಸ್ಥಾನ ಹೊರಡುವನೋ ಅವನು ಗಂಧರ್ವರಿಂದ ಸೇವಿಸಲ್ಪಡುತ್ತಾ ವಿಮಾನದಲ್ಲಿ ಕುಳಿತು ಯಮಾಲಯಕ್ಕೆ ಹೋಗುವನು.

೫೧. ಯಾವನು ವಿಷ್ಣುಭಕ್ತಿಪೂರಿತವಾದ ಅಂತರಂಗದಿಂದ ತನ್ನ ಶರೀರವನ್ನು ಸಾಧನೆಮಾಡುವನೋ ಅವನು ಅಗ್ನಿಯಂತೆ ತೇಜೋಮಯವಾದ ವಿಮಾನದಿಂದ ಯಮಾಲಯವನ್ನು ಸೇರುವನು.

ಅಗ್ನಿ ಪ್ರವೇಶಂ ಯಃ ಕುರ್ಯಾರ್ನಾನ್ನಾರಾಯಣಪರಾಯಣಃ ।
ಸ ಯಾತ್ಯಗ್ನಿಪ್ರಕಾಶೇನ ವಿಮಾನೇನ ಯಮಾಲಯಂ ॥ ೫೨ ॥

ಪ್ರಾಣಾಂಸ್ತ್ಯಜತಿ ಯೋ ಮರ್ತ್ಯಃ ಸ್ಮರನ್ವಿಷ್ಣುಂ ಸನಾತನಂ ।
ಯಾನೇನಾರ್ಕಪ್ರಕಾಶೇನ ಯಾತಿ ಧರ್ಮಪುರಂ ನರಃ ॥ ೫೩ ॥

ಪ್ರವಿಷ್ಟೋಽಂತರ್ಜಲಂ ಯಸ್ತು ಪ್ರಾಣಾಂಸ್ತ್ಯಜತಿ ಮಾನವಃ ।
ಸೋಮಮಂಡಲಕಲ್ಪೇನ ಯಾತಿ ಯಾನೇನ ವೈ ಸುಖಂ ॥ ೫೪ ॥

ಸ್ವಶರೀರಂ ಹಿ ಗೃಧ್ರೇಭ್ಯೋ ವೈಷ್ಣವೋ ಯಃ ಪ್ರಯಚ್ಛತಿ ।
ಸ ಯಾತಿ ರಥಮುಖ್ಯೇನ ಕಾಂಚನೇನ ಯಮಾಲಯಂ ॥ ೫೫ ॥

ಸ್ತ್ರೀಗ್ರಹೇ ಗೋಗ್ರಹೇ ವಾಪಿ ಯುದ್ಧೇ ಮೃತ್ಯುಮುಪೈತಿ ಯಃ ।
ಸ ಯಾತ್ಯಮರಕನ್ಯಾಭಿಃ ಸೇವ್ಯಮಾನೋ ರವಿಪ್ರಭಃ ॥ ೫೬ ॥

---

೫೨. ಯಾವನು ನಾರಾಯಣನನ್ನು ಹೊರತು ಮತ್ತೊಬ್ಬನನ್ನು ಸ್ಮರಿಸದೆ ಅಗ್ನಿ ಪ್ರವೇಶಮಾಡುವನೋ ಅವನು ಅಗ್ನಿಯಂತೆ ಪ್ರಕಾಶಿಸುವ ವಿಮಾನದಿಂದ ಯಮಪುರಿಗೆ ಹೋಗುವನು.

೫೩. ಯಾವನು ವಿಷ್ಣುವನ್ನು ಸ್ಮರಿಸುತ್ತಾ ಪ್ರಾಣಗಳನ್ನು ತೊರೆಯುವನೋ ಅವನು ಸೂರ್ಯನಂತೆ ಪ್ರಕಾಶಮಾನವಾದ ಯಾನದಿಂದ ಯಮಾಲಯಕ್ಕೆ ಪ್ರಯಾಣಮಾಡುವನು.

೫೪. ಯಾವನು ನೀರಿನ ನಡುವೆ ಪ್ರವೇಶಮಾಡಿ ಪ್ರಾಣಗಳನ್ನು ಬಿಡುವನೋ ಅವನು ಚಂದ್ರಮಂಡಲದಂತಿರುವ ವಿಮಾನದಿಂದ ಅಲ್ಲಿಗೆ ಪಯಣ ಬೆಳೆಸುವನು.

೫೫. ಯಾವನು ವಿಷ್ಣುವಿನಲ್ಲೇ ತನ್ನ ಮನಸ್ಸನ್ನು ನೆಲೆಗೊಳಿಸಿ ಹದ್ದುಗಳಿಗೆ ತನ್ನ ಶರೀರವನ್ನು ಒಪ್ಪಿಸುವನೋ ಅವನು ಚಿನ್ನದ ತೇರಿನಲ್ಲಿ ಕುಳಿತು ಯಮಪಟ್ಟಣವನ್ನು ಸೇರುವನು.

೫೬. ಯಾವನು ಕದ್ದುಕೊಂಡುಹೋದ ಸ್ತ್ರೀಯರನ್ನೂ ಹಸುಗಳನ್ನೂ ಬಿಡಿಸಹೋಗಿ ಅದಕ್ಕಾಗಿ ಪ್ರಾಣಗಳನ್ನು ತೊರೆಯುವನೋ ಆತನು ಸೂರ್ಯನಂತೆ ಜ್ವಲಿಸುತ್ತಾ, ದೇವಕನ್ಯೆಯರಿಂದ ಸೇವಿಸಲ್ಪಡುತ್ತಾ ಯಮಪುರಕ್ಕೆ ಹೋಗುವನು.

**ವೈಷ್ಣವಾ ಯೇ ಚ ಕುರ್ವಂತಿ ತೀರ್ಥಯಾತ್ರಾಂ ಜಿತೇಂದ್ರಿಯಾಃ ।**
**ತತ್ಪಥಂ ಯಾಂತಿ ತೇ ಘೋರಂ ಸುಖಯಾನೈರಲಂಕೃತಾಃ ॥ ೫೭ ॥**

**ಯೇ ಯಜಂತಿ ದ್ವಿಜಶ್ರೇಷ್ಠಾಃ ಕ್ರತುಭಿರ್ಭೂರಿದಕ್ಷಿಣೈಃ ।**
**ತಪ್ತಹಾಟಕಸಂಕಾಶೈರ್ವಿಮಾನೈರ್ಯಾಂತಿ ತೇ ಸುಖಂ ॥ ೫೮ ॥**

**ಪರಪೀಡಾಮಕುರ್ವಂತೋ ಭೃತ್ಯಾನಾಂ ಭರಣಾದಿಕಂ ।**
**ಕುರ್ವಂತಿ ತೇ ಸುಖಂ ಯಾಂತಿ ವಿಮಾನೈಃ ಕನಕೋಜ್ಜ್ವಲೈಃ ॥ ೫೯ ॥**

**ಯೇ ಕ್ಷಾಂತಾಃ ಸರ್ವಭೂತೇಷು ಪ್ರಾಣಿನಾಮಭಯಪ್ರದಾಃ ।**
**ಕ್ರೋಧಮೋಹವಿನಿರ್ಮುಕ್ತಾ ನಿರ್ಮದಾಃ ಸಂಯತೇಂದ್ರಿಯಾಃ ॥ ೬೦ ॥**

---

೫೭. ಯಾರು ವಿಷ್ಣುಭಕ್ತಿಯುಳ್ಳವರಾಗಿ ತೀರ್ಥಯಾತ್ರೆ ಮಾಡುವರೋ ಆ ಜಿತೇಂದ್ರಿಯರು ಅಲಂಕೃತರಾಗಿ ಸುಖವಾಗಿ ವಿಮಾನಗಳಲ್ಲಿ ಕುಳಿತು ಆ ಘೋರಮಾರ್ಗವನ್ನು ದಾಟುವರು.

೫೮. ಯಾರು ಅಸಂಖ್ಯಾತವಾದ ದಕ್ಷಿಣೆಗಳನ್ನು ಕೊಡಬೇಕಾದ ಭಾರಿ ಯಜ್ಞಗಳನ್ನು ಮಾಡುವರೋ ಅವರು ಕಾಸಿದ ಚಿನ್ನದಂತೆ ಥಳಥಳಿಸುವ ವಿಮಾನದಲ್ಲಿ ಕುಳಿತು ಸುಖವಾಗಿ ತೆರಳುವರು.

೫೯. ಯಾರು ಪರಹಿಂಸೆಯನ್ನು ಮಾಡದೆ ಸೇವಕರಿಗೆ ಒಡವೆ ವಸ್ತ್ರಗಳನ್ನು ಈಯುವರೋ ಅವರು ಚಿನ್ನದಂತೆ ಹೊಳೆಯುವ ವಿಮಾನವನ್ನೇರಿ ಸುಖವಾಗಿ ಪಯಣಮಾಡುವರು.

೬೦-೬೧. ಯಾರು ಸಕಲ ಪ್ರಾಣಿಗಳಲ್ಲಿಯೂ ಕ್ಷಮೆಯುಳ್ಳವರೋ ಯಾರು ಸರ್ವಜೀವಿಗಳಿಗೂ ಅಭಯವನ್ನು ಕೊಡತಕ್ಕವರೋ ಮತ್ತು ಯಾರು ಕ್ರೋಧ ಮೋಹಗಳನ್ನು ತೊರೆದಿರುವರೋ ಮತ್ತು ಯಾರು ಮದವಿಲ್ಲದೆ, ಇಂದ್ರಿಯಗಳನ್ನು ಜಯಿಸಿ ಇರುವರೋ ಅವರು ಅತಿಶಯವಾದ ಕಾಂತಿಯಿಂದ

ಪೂರ್ಣಚಂದ್ರಪ್ರಕಾಶೇನ ವಿಮಾನೇನ ಮಹಾಪ್ರಭಾಃ ।
ಯಾಂತಿ ವೈವಸ್ವತಪುರಂ ದೇವಗಂಧರ್ವಸೇವಿತಾಃ ॥ ೬೧ ॥

ಏಕಭಾವೇನ ಯೇ ವಿಷ್ಣುಂ ಬ್ರಹ್ಮಾಣಂ ತ್ರ್ಯಂಬಕಂ ರವಿಂ ।
ಪೂಜಯಂತಿ ಹಿ ತೇ ಯಾಂತಿ ವಿಮಾನೈರ್ಭಾಸ್ಕರಪ್ರಭೈಃ ॥ ೬೨ ॥

ಯೇ ಚ ಮಾಂಸಂ ನ ಖಾದಂತಿ ಸತ್ಯಶೌಚಸಮನ್ವಿತಾಃ ।
ತೇಽಪಿ ಯಾಂತಿ ಸುಖೇನೈವ ಧರ್ಮರಾಜಪುರಂ ನರಾಃ ॥ ೬೩ ॥

ಮಾಂಸಾನ್ನಿಕೃಷ್ಟತರಂ ನಾಸ್ತಿ ಭಕ್ಷ್ಯಭೋಜ್ಯಾದಿಕೇಷು ಚ ।
ತಸ್ಮಾನ್ಮಾಂಸಂ ನ ಭುಂಜೀತ ನಾಸ್ತಿ ಮಿಷ್ಟೈಃ ಸುಖೋದಯಃ ॥ ೬೪ ॥

---

ಬೆಳಗುತ್ತಾ, ಪೂರ್ಣಚಂದ್ರನಂತೆ ಪ್ರಕಾಶಿಸುವ ವಿಮಾನದಲ್ಲಿ ಕುಳಿತು ದೇವತೆಗಳಿಂದಲೂ, ಗಂಧರ್ವರಿಂದಲೂ ಸೇವೆಯನ್ನು ಸ್ವೀಕರಿಸುತ್ತಾ ವೈವಸ್ವತ ನಗರಿಗೆ ಹೋಗುವರು.

೬೨. ಯಾರು ವಿಷ್ಣುವನ್ನಾಗಲಿ, ಬ್ರಹ್ಮನನ್ನಾಗಲಿ, ಶಿವನನ್ನಾಗಲಿ, ಸೂರ್ಯನನ್ನಾಗಲಿ, ಐಕ್ಯೈಕಭಾವನೆಯಿಂದ ಪೂಜೆಮಾಡುವರೋ ಅವರು ಸೂರ್ಯನಂತೆ ಪ್ರಭೆಯುಳ್ಳ ವಿಮಾನದಿಂದ ಯಮಪುರಿಗೆ ಹೋಗುವರು.

೬೩. ಯಾರು ಸತ್ಯ, ಶೌಚಗಳಲ್ಲಿ ನಿರತರೋ, ಯಾರು ಮಾಂಸವನ್ನು ತಿನ್ನುವುದಿಲ್ಲವೋ ಅವರೂ ಸಹ ಸುಖವಾಗಿ ಆ ಯಮಪುರಕ್ಕೆ ತೆರಳುವರು.

೬೪. ಭಕ್ಷ್ಯಗಳಲ್ಲಿಯೂ ಭೋಜ್ಯಗಳಲ್ಲಿಯೂ ಮಾಂಸಕ್ಕಿಂತಲೂ ರುಚಿಯಾದುದು ಬೇರೊಂದಿಲ್ಲ. ಆದುದರಿಂದ ಅಂತಹ ಮಾಂಸವನ್ನು ತಿನ್ನಬಾರದು. ಚೊಕ್ಕ ಭೋಜನದಿಂದ ಸುಖವು ಸಿಗಲಾರದು.

ಗೋಸಹಸ್ರಂ ತು ಯೋ ದದ್ಯಾದ್ಯಸ್ತು ಮಾಂಸಂ ನ ಭಕ್ಷಯೇತ್ ।
ಸಮಾವೇತೌ ಪುರಾ ಪ್ರಾಹ ಬ್ರಹ್ಮಾ ವೇದವಿದಾಂ ವರಃ ॥ ೬೫ ॥

ಸರ್ವತೀರ್ಥೇಷು ಯತ್ಪುಣ್ಯಂ ಸರ್ವಯಜ್ಞೇಷು ಯತ್ಫಲಂ ।
ಅಮಾಂಸಭಕ್ಷಣೇ ವಿಪ್ರಾಸ್ತಚ್ಚ ತಚ್ಚ ಚ ತತ್ಸಮಂ ॥ ೬೬ ॥

ಏವಂ ಸುಖೇನ ತೇ ಯಾಂತಿ ಯಮಲೋಕಂ ಚ ಧಾರ್ಮಿಕಾಃ ।
ದಾನವ್ರತಪರಾ ಯಾನೈರ್ಯತ್ರ ದೇವೋ ರವೇಃ ಸುತಃ ॥ ೬೭ ॥

ದೃಷ್ಟ್ವಾ ತಾನ್ಧಾರ್ಮಿಕಾನ್ದೇವಃ ಸ್ವಯಂ ಸಂಮಾನಯೇದ್ಯಮಃ ।
ಸ್ವಾಗತಾಸನದಾನೇನ ಪಾದ್ಯಾರ್ಘ್ಯೇಣ ಪ್ರಿಯೇಣ ತು ॥ ೬೮ ॥

---

೬೫. ಹಿಂದೆ ಸಹಸ್ರ ಗೋದಾನಗಳನ್ನು ಮಾಡಿದವನೂ, ಎಂದೆಂದಿಗೂ ಮಾಂಸವನ್ನು ತಿನ್ನದವನೂ ಅಲ್ಲಿ ಒಟ್ಟಿಗೆ ಒಂದೆಡೆ ಸೇರಿದರು. ಆಗ ಅವರನ್ನು ಕುರಿತು ವೇದವಿತ್ತುಗಳಲ್ಲಿ ಅಗ್ರಗಣ್ಯನಾದ ಬ್ರಹ್ಮನು ಇಂತೆಂದನು.

೬೬. "ಸಕಲ ತೀರ್ಥಗಳನ್ನೂ ಯಾತ್ರೆಮಾಡಿದರೆ ಏನು ಫಲ ವುಂಟೋ, ಸಕಲವಿಧವಾದ ಯಾಗಗಳನ್ನು ಮಾಡಿದರೂ ಏನು ಫಲ ದೊರೆಯು ವುದೋ ಅವೆಲ್ಲವೂ ಸೇರಿ ಮಾಂಸವನ್ನು ತಿನ್ನದಿರುವುದರಿಂದ ಉಂಟಾಗುವ ಫಲಕ್ಕೆ ಸರಿಸಮವು."

೬೭. ಎಲೈ ಮುನಿಗಳಿರಾ! ಈರೀತಿಯಾಗಿ ದಾನಶೀಲರೂ ವ್ರತ ನಿಷ್ಠರೂ ಆದ ಧಾರ್ಮಿಕರು ಸೂರ್ಯಪುತ್ರನಾದ ಆ ಯಮಧರ್ಮರಾಜನು ಇರುವಲ್ಲಿಗೆ ವಿಮಾನಗಳನ್ನೇರಿ ಸುಖವಾಗಿ ಹೋಗಿ ಸೇರುವರು.

೬೮. ಆ ಧಾರ್ಮಿಕರನ್ನು ಕಾಣುತ್ತಲೇ ಆ ಯಮಧರ್ಮರಾಜನೇ ಸಾಕ್ಷಾತ್ತಾಗಿ ಅವರಿಗೆ ಸ್ವಾಗತಬಯಸಿ ಆಸನವಿತ್ತು, ಪಾದ್ಯ, ಅರ್ಘ್ಯ ಮೊದ ಲಾದ ಉಪಚಾರಗಳಿಂದಲೂ ಪ್ರಿಯವಾಕ್ಯದಿಂದಲೂ ಗೌರವಿಸುವನು.

ಧನ್ಯಾ ಯೂಯಂ ಮಹಾತ್ಮಾನ ಆತ್ಮನೋ ಹಿತಕಾರಿಣಃ ।
ಯೇನ ದಿವ್ಯಸುಖಾರ್ಥಾಯ ಭವದ್ಭಿಃ ಸುಕೃತಂ ಕೃತಂ ॥ ೬೯ ॥

ಇದಂ ವಿಮಾನಮಾರುಹ್ಯ ದಿವ್ಯಸ್ತ್ರೀಭೋಗಭೂಷಿತಾಃ ।
ಸ್ವರ್ಗಂ ಗಚ್ಛಧ್ವಮತುಲಂ ಸರ್ವಕಾಮಸಮನ್ವಿತಂ ॥ ೭೦ ॥

ತತ್ರ ಭುಕ್ತ್ವಾ ಮಹಾಭೋಗಾನಂತೇ ಪುಣ್ಯಪರಿಕ್ಷಯಾತ್ ।
ಯತ್ಕಿಂಚಿದಲ್ಪಮಶುಭಂ ಫಲಂ ತದಿಹ ಭೋಕ್ಷ್ಯಥ ॥ ೭೧ ॥

ಯೇ ತು ತಂ ಧರ್ಮರಾಜಾನಂ ನರಾಃ ಪುಣ್ಯಾನುಭಾವತಃ ।
ಪಶ್ಯಂತಿ ಸೌಮ್ಯಮನಸಂ ಪಿತೃಭೂತಮಿವಾತ್ಮನಃ ॥ ೭೨ ॥

---

೬೯. ಎಲೈ ಮಹಾತ್ಮರೇ! ಆತ್ಮನ ಹಿತವನ್ನು ಕಾದುಕೊಂಡ ನೀವೇ ಧನ್ಯರು. ಏಕೆಂದರೆ ದಿವ್ಯವಾದ ಸುಖಗಳನ್ನು ಅನುಭವಿಸಲು ನೀವು ಪುಣ್ಯವನ್ನು ಗಳಿಸಿರುವಿರಿ.

೭೦. ಈ ವಿಮಾನವನ್ನೇರಿ ಕುಳಿತು ಸ್ವರ್ಗಸ್ತ್ರೀಯರಿಂದ ಸೇವೆ ಮಾಡಿಸಿಕೊಳ್ಳುತ್ತಾ, ಸಕಲವಾದ ಇಷ್ಟಾರ್ಥಗಳಿಂದ ತುಂಬಿರುವ ಉಪಮಾತೀತವೆನಿಸಿದ ಸ್ವರ್ಗಲೋಕಕ್ಕೆ ಹೋಗಿರಿ.

೭೧. ಅಲ್ಲಿ ದಿವ್ಯವಾದ ಭೋಗಗಳನ್ನು ಅನುಭವಿಸಿ ಕೊನೆಗೆ ಪುಣ್ಯಫಲವು ಮುಗಿದನಂತರ ಏನಾದರೂ ಅಶುಭವಾದ ಫಲವು ಸ್ವಲ್ಪವಿದ್ದರೆ ಅದನ್ನು ಇಲ್ಲಿ ಅನುಭವಿಸಿರಿ, ಎಂದು ನುಡಿಯುವನು.

೭೨. ಯಾವ ಮನುಷ್ಯರು, ಆ ಧರ್ಮರಾಜನನ್ನು ಸೌಮ್ಯವಾದ ಮನಸ್ಸುಳ್ಳವನೆಂದೂ, ತಮಗೆ ತಂದೆಯಂತೆ ಇರುವನೆಂದೂ ಅರಿಯುವರೋ, ಅದು ಅವರ ಪುಣ್ಯದ ಮಹಿಮೆಯಿಂದಲೇ.

ತಸ್ಮಾದ್ಧರ್ಮಃ ಸೇವಿತವ್ಯಃ ಸದಾ ಮುಕ್ತಿಫಲಪ್ರದಃ ।
ಧರ್ಮಾದರ್ಥಸ್ತಥಾ ಕಾಮೋ ಮೋಕ್ಷಶ್ಚ ಪರಿಕೀರ್ತ್ಯತೇ ॥ ೭೩ ॥

ಧರ್ಮೋ ಮಾತಾ ಪಿತಾ ಭ್ರಾತಾ ಧರ್ಮೋ ನಾಥಃ ಸುಹೃತ್ತಥಾ ।
ಧರ್ಮಃ ಸ್ವಾಮೀ ಸಖಾ ಗೋಪ್ತಾ ತಥಾ ಧಾತಾ ಚ ಪೋಷಕಃ ॥ ೭೪ ॥

ಧರ್ಮಾದರ್ಥೋಽರ್ಥತಃ ಕಾಮಃ ಕಾಮಾದ್ಭೋಗಃ ಸುಖಾನಿ ಚ ।
ಧರ್ಮಾದೈಶ್ವರ್ಯಮೇಕಾಗ್ರ್ಯಂ ಧರ್ಮಾತ್ಸ್ವರ್ಗಗತಿಃ ಪರಾ ॥ ೭೫ ॥

ಧರ್ಮಸ್ತು ಸೇವಿತೋ ವಿಪ್ರಾಸ್ತ್ರಾಯತೇ ಮಹತೋ ಭಯಾತ್ ।
ದೇವತ್ವಂ ಚ ದ್ವಿಜತ್ವಂ ಚ ಧರ್ಮಾತ್ಪ್ರಾಪ್ನೋತ್ಯಸಂಶಯಂ ॥ ೭೬ ॥

---

೭೩. ಆದುದರಿಂದ ಮೋಕ್ಷಸುಖವನ್ನು ಕೊಡತಕ್ಕ ಧರ್ಮವನ್ನು ಸರ್ವದಾ ಸೇವಿಸಬೇಕು. ಧರ್ಮದಿಂದಲೇ ಅರ್ಥವೂ ಕಾಮವೂ ಮೋಕ್ಷವೂ ದೊರೆಯುವುದೆಂದು ಹೇಳುವರು.

೭೪. ಧರ್ಮವೇ ತಾಯಿ. ಧರ್ಮವೇ ತಂದೆ. ಧರ್ಮವೇ ಸಹೋದರನು. ಧರ್ಮವೇ ಪ್ರಭುವು. ಧರ್ಮವೇ ಸ್ನೇಹಿತನು. ಧರ್ಮವೇ ಸ್ವಾಮಿಯು. ಧರ್ಮವೇ ಸಖನು. ಧರ್ಮವೇ ಸಂರಕ್ಷಕನು. ಧರ್ಮವೇ ಧಾತೃ (ಜನಕನು) ವು. ಧರ್ಮವೇ ಪಾಲಕನು,

೭೫. ಧರ್ಮದಿಂದ ಅರ್ಥವೂ, ಅರ್ಥದಿಂದ ಕಾಮವೂ, ಕಾಮದಿಂದ ಸುಖ ಭೋಗಗಳೂ, ಆಗುವುವಲ್ಲದೆ, ಅದೇ ಧರ್ಮದಿಂದಲೇ ಅತ್ಯುನ್ನತವಾದ ಐಶ್ವರ್ಯವೂ ಧರ್ಮದಿಂದಲೇ ಉತ್ಕೃಷ್ಟವಾದ ಸ್ವರ್ಗವೂ ಉಂಟಾಗುವುದು.

೭೬. ಧರ್ಮವನ್ನು ಸೇವೆಮಾಡಿದರೆ ಬಹುಭಾರಿಯಾದ ಭಯದಿಂದಲಾದರೂ ಸಂರಕ್ಷಿಸುವುದು. ಅದೇ ಧರ್ಮದಿಂದಲೇ ದೇವತ್ವವನ್ನೂ ಬ್ರಾಹ್ಮಣ್ಯವನ್ನೂ ಪಡೆಯುವನು. ಇದರಲ್ಲಿ ಸಂದೇಹವಿಲ್ಲ.

ಯದಾ ಚ ಕ್ಷೀಯತೇ ಪಾಪಂ ನರಾಣಾಂ ಪೂರ್ವಸಂಚಿತಂ ।
ತದೈಷಾಂ ಭಜತೇ ಬುದ್ಧಿರ್ಧರ್ಮಂ ಚಾತ್ರ ದ್ವಿಜೋತ್ತಮಾಃ ॥ ೭೭ ॥

ಜನ್ಮಾಂತರಸಹಸ್ರೇಷು ಮಾನುಷ್ಯಂ ಪ್ರಾಪ್ಯ ದುರ್ಲಭಂ ।
ಯೋ ಹಿ ನಾಚರತೇ ಧರ್ಮಂ ಭವೇತ್ಸ ಖಲು ವಂಚಿತಃ ॥ ೭೮ ॥

ಕುತ್ಸಿತಾ ಯೇ ದರಿದ್ರಾಶ್ಚ ವಿರೂಪಾ ವ್ಯಾಧಿತಾಸ್ತಥಾ ।
ಪರಪ್ರೇಷ್ಯಾಶ್ಚ ಮೂರ್ಖಾಶ್ಚ ಜ್ಞೇಯಾ ಧರ್ಮವಿವರ್ಜಿತಾಃ ॥ ೭೯ ॥

ಯೇ ಹಿ ದೀರ್ಘಾಯುಷಃ ಶೂರಾಃ ಪಂಡಿತಾ ಭೋಗಿನೋಽರ್ಥಿನಃ ।
ಅರೋಗಾ ರೂಪವಂತಶ್ಚ ತೈಸ್ತು ಧರ್ಮಃ ಪುರಾ ಕೃತಃ ॥ ೮೦ ॥

---

೭೭. ಎಲೈ ಬ್ರಾಹ್ಮಣೋತ್ತಮರಿರಾ! ಪೂರ್ವದಲ್ಲಿ ಮಾಡಿದ್ದ ಪಾಪಗಳೆಲ್ಲವೂ ಕಳೆದುಹೋದನಂತರ ಮಾನವರ ಬುದ್ಧಿಯು ಧರ್ಮವನ್ನೇ ಆಶ್ರಯಿಸುವುದು.

೭೮. ಸಾವಿರಾರು ಜನ್ಮಗಳಿಗೆ ಒಂದುಬಾರಿಯಾದರೂ ಸಿಗಲು|ಅಸಾಧ್ಯವೆನಿಸಿದ ಮನುಷ್ಯ ಜನ್ಮವನ್ನು ಹೊಂದಿಯೂ ಕೂಡ ಯಾವನು ಧರ್ಮವನ್ನು ಮಾಡದಿರುವನೋ ಅಂಥವನನ್ನು ಮೋಸಹೋದನೆಂದೇ ಹೇಳಬೇಕು.

೭೯. ಯಾರು ಈ ಜನ್ಮದಲ್ಲಿ ಕೆಟ್ಟವರೂ, ದರಿದ್ರರೂ, ಕುರೂಪಿಗಳೂ, ಸರ್ವದಾ ರೋಗದಿಂದ ನರಳುತ್ತಿರುವವರೂ, ಇನ್ನೊಬ್ಬರ ಮನೆಯಲ್ಲಿ ಆಳುಗಳೂ, ಬುದ್ಧಿಹೀನರೂ ಆಗಿ ಇರುವರೋ ಅವರು ಹಿಂದೆ ಧರ್ಮವನ್ನು ಮಾಡಿರಲಿಲ್ಲವೆಂದು ತಿಳಿಯಬೇಕು.

೮೦. ಯಾರು ಈ ಜನ್ಮದಲ್ಲಿ ಚಿರಾಯುಗಳೋ, ಯಾರು ಶೂರರೋ, ಯಾರು ವಿದ್ಯಾವಂತರೋ, ಯಾರು ಭೋಗಿಗಳೋ, ಯಾರು ಐಶ್ವರ್ಯವಂತರೋ, ಯಾರು ಆರೋಗ್ಯಶಾಲಿಗಳೋ, ಯಾರು ರೂಪವಂತರೋ ಅವರೆಲ್ಲರೂ ಹಿಂದೆ ಧರ್ಮಗಳನ್ನು ನಡೆಸಿದವರೆಂದು ತಿಳಿಯಬೇಕು.

ಏವಂ ಧರ್ಮರತಾ ವಿಪ್ರಾ ಗಚ್ಛಂತಿ ಗತಿಮುತ್ತಮಾಂ ।
ಅಧರ್ಮಂ ಸೇವಮಾನಾಸ್ತು ತಿರ್ಯಗ್ಯೋನಿಂ ವ್ರಜಂತಿ ತೇ　　॥ ೮೧ ॥

ಯೇ ನರಾ ನರಕಧ್ವಂಸಿವಾಸುದೇವಮನುವ್ರತಾಃ ।
ತೇ ಸ್ವಪ್ನೇಽಪಿ ನ ಪಶ್ಯಂತಿ ಯಮಂ ವಾ ನರಕಾಣಿ ವಾ　　॥ ೮೨ ॥

ಅನಾದಿನಿಧನಂ ದೇವಂ ದೈತ್ಯದಾನವದಾರಣಂ ।
ಯೇ ನಮಂತಿ ನರಾ ನಿತ್ಯಂ ನ ಹಿ ಪಶ್ಯಂತಿ ತೇ ಯಮಂ　　॥ ೮೩ ॥

ಕರ್ಮಣಾ ಮನಸಾ ವಾಚಾ ಯೇಽಚ್ಯುತಂ ಶರಣಂ ಗತಾಃ ।
ನ ಸಮರ್ಥೋ ಯಮಸ್ತೇಷಾಂ ತೇ ಮುಕ್ತಿಫಲಭಾಗಿನಃ　　॥ ೮೪ ॥

---

೮೧. ಎಲೈ ದ್ವಿಜೋತ್ತಮರಿರಾ! ಈರೀತಿಯಾಗಿ ಧರ್ಮದಲ್ಲಿ ನಿರತ ರಾದವರು ಉತ್ತಮವಾದ ಗತಿಯನ್ನು ಪಡೆಯುವರು. ಅಧರ್ಮಕಾರ್ಯಾಸಕ್ತರು ಮಾತ್ರ ತಿರ್ಯಗ್ಜಂತು (ಮೂಗುಪ್ರಾಣಿ) ಗಳಾಗಿ ಹುಟ್ಟುವರು.

೮೨. ಯಾವ ಮಾನವರು ನರಕಾಸುರನನ್ನು ಸಂಹರಿಸಿದ ಶ್ರೀ ವಾಸು ದೇವನನ್ನೇ ನಂಬಿರುವರೋ ಅವರು ಸ್ವಪ್ನದಲ್ಲಿಯೂ ಯಮನನ್ನು ಕಾಣಲಾರರು.

೮೩. ಯಾರು ಆದ್ಯಂತರಹಿತನೂ ದೈತ್ಯ ದಾನವ ಸಂಹಾರಿಯೂ ಆದ ಪರಮಪುರುಷನನ್ನು ನಿತ್ಯವೂ ನಮಸ್ಕರಿಸುವರೋ ಅವರು ಯಮನನ್ನು ಸಂದರ್ಶಿಸಲಾರರು.

೮೪. ಯಾರು ಮಾತಿನಿಂದಲೂ, ಮನಸ್ಸಿನಿಂದಲೂ, ಶರೀರದಿಂದಲೂ ಆ ಅಚ್ಯುತನನ್ನೇ ಶರಣೆಂದು ಭಾವಿಸಿರುವರೋ ಅಂಥವರನ್ನು ಎಳೆದೊಯ್ಯಲು ಯಮನಿಗೆ ಶಕ್ತಿಯಿಲ್ಲ. ಆ ಮಾನವರು ಮೋಕ್ಷಫಲವನ್ನು ಹೊಂದುವರು.

ಯೇ ಜನಾ ಜಗತಾಂ ನಾಥಂ ನಿತ್ಯಂ ನಾರಾಯಣಂ ದ್ವಿಜಾಃ ।
ನಮಂತಿ ನ ಹಿ ತೇ ವಿಷ್ಣೋಃ ಸ್ಥಾನಾದನ್ಯತ್ರ ಗಾಮಿನಃ ॥ ೮೫ ॥

ನ ತೇ ದೂತಾನ್ನ ತನ್ಮಾರ್ಗಂ ನ ಯಮಂ ನ ಚ ತಾಂ ಪುರೀಂ ।
ಪ್ರಣಮ್ಯ ವಿಷ್ಣುಂ ಪಶ್ಯಂತಿ ನರಕಾಣಿ ಕಥಂಚನ ॥ ೮೬ ॥

ಕೃತ್ವಾಪಿ ಬಹುಶಃ ಪಾಪಂ ನರಾ ಮೋಹಸಮನ್ವಿತಾಃ ।
ನ ಯಾಂತಿ ನರಕಂ ನತ್ವಾ ಸರ್ವಪಾಪಹರಂ ಹರಿಂ ॥ ೮೭ ॥

ಶಾಠ್ಯೇನಾಪಿ ನರಾ ನಿತ್ಯಂ ಯೇ ಸ್ಮರಂತಿ ಜನಾರ್ದನಂ ।
ತೇಽಪಿ ಯಾಂತಿ ತನುಂ ತ್ಯಕ್ತ್ವಾ ವಿಷ್ಣುಲೋಕಮನಾಮಯಂ ॥ ೮೮ ॥

---

೮೫. ಯಾವನು ಈ ಸಕಲ ಪ್ರಪಂಚಕ್ಕೂ ಒಡೆಯನೋ ಅಂತಹ ನಾರಾಯಣನನ್ನು ಪ್ರತಿನಿತ್ಯವೂ ಯಾರು ನಮಸ್ಕರಿಸುವರೋ ಅವರು ವೈಕುಂಠವನ್ನಲ್ಲದೆ ಮತ್ತೆ ಬೇರೆಕಡೆ ಹೋಗಲಾರರು.

೮೬. ಒಂದುಬಾರಿ ಆ ವಿಷ್ಣುವನ್ನು ನಮಸ್ಕರಿಸಿದವರು ಸಹ ಆ ಯಮದೂತರನ್ನೂ, ಆ ಮಹಾಮಾರ್ಗವನ್ನೂ, ಆ ಯಮನನ್ನೂ, ಆ ಪಟ್ಟಣವನ್ನೂ, ಆ ನರಕಗಳನ್ನೂ ಎಂದೆಂದಿಗೂ ನೋಡಲಾರರು.

೮೭. ಯಾವ ಮನುಜರು ಬುದ್ಧಿಗೆಟ್ಟು ಅನೇಕವಿಧವಾದ ಪಾಪಗಳನ್ನು ಬಹುವಾಗಿ ಮಾಡಿರುವರೋ ಅವರೂ ಸಹ ಸಕಲ ಪಾಪಪರಿಹಾರಕನಾದ ಆ ಶ್ರೀಹರಿಯನ್ನು ನಮಸ್ಕಾರಮಾಡಿದರೆ ನರಕಕ್ಕೆ ಹೋಗಲಾರರು.

೮೮. ಯಾವ ಮನುಷ್ಯರು ದ್ವೇಷದಿಂದಲಾದರೂ ಶ್ರೀಹರಿಯನ್ನು ಪ್ರತಿನಿತ್ಯವೂ ಸ್ಮರಿಸುವರೋ ಅವರು ತಮ್ಮ ಶರೀರವನ್ನು ತೊರೆದನಂತರ ಯಾವ ತೊಂದರೆಯೂ ಇಲ್ಲದ ವಿಷ್ಣುಲೋಕವನ್ನು ಪಡೆಯುವರು.

ಅತ್ಯಂತಕ್ರೋಧಸಕ್ತೋಽಪಿ ಕದಾಚಿತ್ಕೀರ್ತಯೇದ್ಧರಿಂ ।
ಸೋಽಪಿ ದೋಷಕ್ಷಯಾನ್ಮುಕ್ತಿಂ ಲಭೇಚ್ಚೇದಿಪತಿರ್ಯಥಾ ॥ ೮೯ ॥

ಇತಿ ಶ್ರೀಮಹಾಪುರಾಣೇ ಆದಿಬ್ರಾಹ್ಮೇ ವ್ಯಾಸರ್ಷಿಸಂವಾದೇ
ಧಾರ್ಮಿಕಾಣಾಂ ಸುಗತಿನಿರೂಪಣಂ ನಾಮ
ಷೋಡಶಾಧಿಕದ್ವಿಶತತಮೋಽಧ್ಯಾಯಃ

---

೮೯. ಯಾವನು ಮಿತಿಮೀರಿದ ಕೋಪದಿಂದಲಾಗಲೀ, ಒಂದುವೇಳೆ ಶ್ರೀಹರಿಯ ಹೆಸರನ್ನು ಉಚ್ಚರಿಸುವನೋ-ಅವನು ಚೇದಿದೇಶದ ಅರಸನಾದ ಶಿಶುಪಾಲನಂತೆ, ತನ್ನ ದೋಷವನ್ನು ಕಳೆದುಕೊಂಡನಂತರ ಮುಕ್ತಿಯನ್ನೇ ಹೊಂದುವನು.

ಇಲ್ಲಿಗೆ ಶ್ರೀಬ್ರಹ್ಮಪುರಾಣದಲ್ಲಿ ವ್ಯಾಸಋಷಿಸಂವಾದರೂಪವಾದ ಧರ್ಮನಿಷ್ಠರಾದವರಿಗೆ ಪ್ರಾಪ್ತವಾಗುವ ಸುಗತಿನಿರೂಪಣವೆಂಬ ಇನ್ನೂರ ಹದಿನಾರನೆಯ ಅಧ್ಯಾಯವು ಮುಗಿದುದು.

ಐದನೆಯಭಾಗವು ಮುಗಿದುದು.

॥ ಮಂಗಳಂ ॥

